# ಅಪರಂಜಿ

ಸಂಪುಟ-೧ | ಭಾದ್ರಪದ ಆಶ್ವಿಜ ೮೩ | ಸಂಚಿಕೆ-೧



ಅಪರಂಜಿ ವಾರ್ಷಿಕ ಸಂಪುಟ 1983-1984

# ಅಪರಂಜಿ

( ತಿಳಿನಗೆಯ ಕಾರಂಜಿ )

ಸಂಪುಟ-೧ ಶ್ರಾವಣ ೧೯೮೩ ಸಂಚಿಕೆ-೧




ಸಂಪಾದಕರು : ಆರ್. ಶೇಷಗಿರಿರಾವ್ ವಾರ್ಷಿಕ ಚಂದಾ: ರೂ. ೨೫.೦೦

“ನಗುವು ಸಹಜ ಧರ್ಮ : ನಗಿಸುವುದು ಪರಧರ್ಮ !
ನಗುವ ಕೇಳುತ, ನಗುವುದತಿಶಯದ ಧರ್ಮ ॥
ನಗುವ, ನಗಿಸುವ, ನಗಿಸಿ ನಗುತ ಬಾಳುವ ವರವ !
ಮಿಗೆ ನೀನು ಬೇಡಿಕೊಳೊ—ಮಂಕುತಿಮ್ಮ ॥”



ಶುಭಾಶಯಗಳೊಂದಿಗೆ—



ಶುಭಾಶಯಗಳೊಂದಿಗೆ—

# ಎಸ್. ಎಸ್. ಗಿರಿಮಾಜಿ ಎಂಡ್ ಸನ್ಸ್

( ಬೆಂಗಳೂರು )

ನಂ. 46. ಇಂಡಸ್ಟ್ರಿಯಲ್ ಸಬರ್ಬ್
ಯಶವಂತಪುರ ಬೆಂಗಳೂರು 560022

# ಅಪರಂಜಿ

( ತಿಳಿನಗೆಯ ಕಾರಂಜಿ )

ಗೌರವ ಸಲಹೆಗಾರರು

ಶ್ರೀ ರಾ.ಶಿ.

ಶ್ರೀ ಅ.ರಾ.ಸೇ.

ಪ್ರಕಾಶಕರು ಮತ್ತು ಸಂಪಾದಕರು

ಶ್ರೀ ಶೇಷಗಿರಿ

ವಾರ್ಷಿಕ ಚಂದಾ : ರೂ. 25-00

ಮುದ್ರಣ

ಬೃಂದಾವನ ಮುದ್ರಣ, ಜಯನಗರ, ಮೈಸೂರು-14

## ಮನವಿ

ಕೊರವಂಜಿ ಕಾಡಿಗೆ ಹೋಗಿ ಅಪರಂಜಿಯನ್ನು ನಾಡಿಗೆ ಕಳಿಸಿದ್ದಾಳೆ.

ಶ್ರೀಗಳಾದ ರಾ.ಶಿ., ನಾ. ಕಸ್ತೂರಿ ಅಪರಂಜಿಯನ್ನು ಆಶೀರ್ವದಿಸಿದ್ದಾರೆ.

ಕೊರವಂಜಿಯ ಬಳಗದವರೂ, ಹೊಸ ಲೇಖಕರೂ ನಿಮಗಾಗಿ ಅಪರಂಜಿಯಲ್ಲಿ ತಿಳಿನಗೆಯ ಹೊನಲು ಹರಿಸುತ್ತಾರೆ.

ಸದ್ಯಕ್ಕೆ ಚಂದಾದಾರರಿಗೆ ಮಾತ್ರ 'ಅಪರಂಜಿ' ಲಭ್ಯ. ವಾರ್ಷಿಕ ಚಂದಾ ರೂ. ೨೫-00

ಶ್ರೀ ಆರ್. ಶೇಷಗಿರಿರಾವ್

ದುರ್ಗಾಲಯ, ವಿ.ಪಿ. ಎಕ್ಸ್‌ಟೆನ್ಷನ್

ಚಿತ್ರದುರ್ಗ-೫೭೭ ೫೦೧

ಈ ವಿಳಾಸಕ್ಕೆ ಮನಿಆರ್ಡರ್ ಅಥವಾ ಡ್ರಾಫ್ಟ್ ಮೂಲಕ ಹಣ ಕಳಿಸಿ ಅಪರಂಜಿಯನ್ನು ಸ್ವಾಗತಿಸಿ.

# ಅಪರಂಜಿ

## ( ತಿಳಿನಗೆಯ ಕಾರಂಜಿ )

ಸಂಪುಟ-೧ ಶ್ರಾವಣ ೧೯೮೩ ಸಂಚಿಕೆ-೧

---

ಪ್ರಾಯ ಬಂದು ಸಿದ್ಧಳಾದಾಗ,
ಕೊರವಂಜಿ ಕಾಡಿಗೆ ಹೋಗಿ ನಲಿದಾಡುತ್ತಿದ್ದಳು.
ಆಗ ಹೊರಗಿನ ಹವ್ಯಾಸ ನಿಂತುಹೋಗಿತ್ತು.
ಈಗ ಕೊರವಂಜಿಯ ಹಳೆಯ ಜೊತೆಗಾರರು
"ಅಪರಂಜಿ" ಯಾಗಿ ನಲಿದಾಡಲು ಮುಂದೆ
ಬಂದಿದ್ದಾರೆ. ಈಗಿನ ಕಾಲದಲ್ಲಿ ನಗೆಯ
ಅಗತ್ಯ ಹೆಚ್ಚು. ಅದರಿಂದಾಗಿ ಕೊರವಂಜಿ
"ಅಪರಂಜಿಯು ಚಿರಕಾಲ ನಗುತ್ತ,
ನಗಿಸುತ್ತ ಬಾಳಲಿ" ಎಂದು ಬುಡುಬುಡುಕೆ
ಆಡಿಸುತ್ತಾಳೆ.

ರಾ. ಶಿ.

## ‘ಈಶಾವಾಸ್ಯಮಿದಂ ಹಾಸ್ಯಂ’

‘ಈಶಾವಾಸ್ಯಮಿದಂ ಹಾಸ್ಯಂ’. ತನ್ನ ಸೃಷ್ಟಿಯನ್ನು ಅವಲೋಕಿಸಿ ಈಶ ತಾನೇ ಹೇಸಿದ. ಅಳಬೇಕೋ ನಗಬೇಕೋ ಎಂಬ ಇಕ್ಕಟ್ಟಿಗೆ ಸಿಕ್ಕಿ, ಪುಣ್ಯಕ್ಕೆ ನಕ್ಕ. ಆದ್ದರಿಂದ ನಾವೂ ನಗಬಹುದಾಗಿದೆ. ನಮ್ಮನ್ನು ವಿಕಾರಗೊಳಿಸಿದ ಬ್ರಹ್ಮನಿಗೆ ನಾವು ಗುಡಿ ಕಟ್ಟಿಲ್ಲ. ಅವನಂತೆ ನಕ್ಕು ಅವನಿಗೆ ನುಡಿಯ ನೈವೇದ್ಯವರ್ಪಿಸುತ್ತಿದ್ದೇವೆ. ಓರೆಗಣ್ಣು, ಮುರುಕುಮೂಗು, ಹಿತ್ತಾಳೆ ಕಿವಿ, ಖಾಲಿ ಬುರುಡೆ, ಬೂದಿ ಮುಚ್ಚಿದ ಕಂಠ, ಕೊಳಕು ಕಳೇಬರ, ಸೊಟ್ಟಗಾಲುಗಳ ಸಾಲನ್ನು ಕಂಡು, ಕಾಣಿಸಿ, ಪರಸ್ಪರ ಹೊಗಳಿಕೆ ತೆಗಳಿಕೆಗಳ ಚಕ್ಕಳಗುಳಿ ಇರಿಸಿ ಬದುಕುತ್ತಿದ್ದೇವೆ. ತಿಳಿದವರು ತಳಮಳಗೊಳ್ಳದಂತೆ, ವಚನಗಾರರ ಉಪದೇಶದಂತೆ ಕೊಲಬೇಕು ಕೊಬ್ಬಿದ ಮನವನು, ಕಳಬೇಕು ತಿಳಿಗೇಡಿತನವನ್ನು, ಹಾಸಿಯ ಕಡಿಯಬೇಕು, ಚೆನ್ನವ ಬಣ್ಣಿಸಬೇಕು – ಅನ್ಯಕ್ಕಸಹ್ಯ ಪಡಬೇಕು, ಇದೇ ಅಪರಂಜಿ ನೀತಿ, ಇದೇ ಅಂದಿನ ಕೊರವಂಜಿಯ ಮೊರೆ.

ಆ ಮೊರೆಯು ಮರೆತರು ಜನ. ಆ ನೀತಿಯೋ ನವನೀತಿ; ಇಂದಿಗೆ ನಾಳೆಗೆ. ಏಕೆಂದರೆ, ಈಗ ಬಡಾಯಿಗಾರನೇ ಬಹದ್ದೂರ, ಹಣವಂತನೇ ಮಾಣೆವಂತ! ಬರೆ ಎಳೆವುದೇ ಬರಹದ ಗುರಿ! ಉಗುಳೇ ಉತ್ತಮ ವರ್ತನೆ! ನಿಜನುಡಿ ಹೇಡಿಯ ಮೋಡಿ! ಎಡಗೈಗೆ ಬಂದದ್ದೇ ಎಡೆಬಿಡದ ಎಡೆ, ತಂಗಿಯರ ಸುಡುವುದೇ ಕಾಮನಹಬ್ಬ, ಎಂದಾಗಿದೆ ಜನಮನದ ಜಾಯಮಾನ. ತಿಳಿದವರು, ತಿಳಿಯ ಬಯಸುವವರು, ತಿಳಿಸಬಲ್ಲವರು, ತೆಳುನುಡಿಯ ತೀರ್ಥವನ್ನಿತ್ತು, ಆ ಜನಮನದ ಕಲ್ಮಷ ಕಳೆಯಲೆಳಸಬೇಕು. ‘ಅಪರಂಜಿ’ ಆ ವ್ರತವನ್ನವಲಂಬಿಸಿ, ಅದನ್ನು ಸಫಲಗೊಳಿಸಲಿ,

—ಶ್ರೀ ನಾ. ಕಸ್ತೂರಿ

# ಸ್ವ ವಿಷಯ

ಅಪರಂಜಿಯ ಮೊದಲ ಸಂಚಿಕೆ ನಿಮ್ಮ ಕೈಲಿದೆ. ಹಾಸ್ಯಪ್ರಿಯರಾದ ನಿಮಗೆ ಇದು ಮೆಚ್ಚುಗೆಯಾಗಲಿ ಎಂಬುದು ನಮ್ಮ ಹಾರೈಕೆ.

ಕೊರವಂಜಿಯ ಜನಕ ಡಾ|| ರಾ.ಶಿ.ಯವರು ನಿಮ್ಮ ಈ ಪತ್ರಿಕೆಗೆ 'ಅಪರಂಜಿ' ಎಂಬ ನಾಮಕರಣ ಮಾಡಿ ಹರಸಿದ್ದಾರೆ. ನಮಗೆ ಅವರು ಗೌರವ ಸಲಹೆಗಾರರೂ ಆಗಿದ್ದಾರೆ.

ಕನ್ನಡ ಕಸ್ತೂರಿ ನಾ. ಕಸ್ತೂರಿಯವರು ಶುಭಾಶಯಗಳನ್ನು ನೀಡಿದ್ದಾರೆ.

ಕೊರವಂಜಿಯ ಬಳಗದ ಶ್ರೀಮತಿ ಟಿ. ಸುನಂದಮ್ಮ, ಕೇಫ, ರಾಮಿ ಇವರು ನಮ್ಮ ಬೆಂಬಲಕ್ಕೆ ಬಂದಿದ್ದಾರೆ.

ಶ್ರೀಗಳಾದ ಶಿವಕುಮಾರ್ ಹಾಗೂ ಡಾ|| ಓಂಪ್ರಕಾಶ್ ಇಬ್ಬರೂ ನಮ್ಮ ಸಡಗರ ದಲ್ಲಿ ಸಹಭಾಗಿಗಳು.

ಲೇಖಕರೂ, ಜಾಹಿರಾತುದಾರರೂ ಸ್ವಸಂತೋಷದಿಂದ ನೆರವು ನೀಡಿದ್ದಾರೆ. ಅಮಿತ ಉತ್ಸಾಹ ತೋರಿದ್ದಾರೆ. ಇವರೆಲ್ಲರ ಒಲವಿಗೆ ಋಣಿಯಾದ ಅಪರಂಜಿ, ಮುದ್ರಣಕಾರರ ಸಹಕಾರವನ್ನು ಅಭಿಮಾನದಿಂದ ಸ್ಮರಿಸುತ್ತಾಳೆ.

ಹಾಸ್ಯಪ್ರಿಯರಿಗೆ ನಮ್ಮ ಪ್ರಾರ್ಥನೆ: ಚಂದಾದಾರರಾಗಿ ನಮ್ಮನ್ನು ಪ್ರೋತ್ಸಾಹಿಸಿ. 'ಅಪರಂಜಿ' ನಿಮ್ಮ ನಲಿವಿನ, ನೋವಿನ ಸಹಭಾಗಿಯಾಗುವಂತೆ ಪೋಷಿಸಿ.

# ಅಭಿಮಾನಿಗಳ ಸಂದೇಶಗಳು

೧ ತಿಳಿನಗೆ ಎಷ್ಟು ಜನಕ್ಕೆ ಬೇಕು ? ನೂರೋ ಇನ್ನೂರೋ ಜನ ಕೊಂಡು ಓದ ಬಹುದು. ನಿಮ್ಮ ಆರ್ಥಿಕ ಬವಣೆ ಹಿಂಗೀತೇ. ಅಪರಂಜಿ ನಿಮ್ಮ ಬೆನ್ನ ಮೇಲೆ ಹೇರಿದ ಕಲ್ಲಾಗಬಾರದಷ್ಟೇ!

೨ ನಿಮ್ಮ ಅಪ್ಪ ಅಜ್ಜ ಬಿಟ್ಟ ಪ್ಲಾಂಟೇಷನ್ ಇದೆಯೆ ? ನೀವೇನು ಕುಬೇರರೇ ? ಪತ್ರಿಕೆ ಹೊರಡಿಸುತ್ತೀರಲ್ಲಾ.

೩. ಕನ್ನಡಿಗರು ಕೊಂಡು ಓದುವುದನ್ನು ಕಲಿಯಲಿಲ್ಲ.

೪ ನಿಮ್ಮ ಉದ್ಯಮ ಅರಣ್ಯ ಸಂಪತ್ತನ್ನು ರಕ್ಷಿಸುವ ಕೆಲಸದಂತೆ ಆಗದಿರಲಿ.

೫ ಏನಯ್ಯಾ ? ವರ್ಷಕ್ಕೆ ಇಪ್ಪತ್ತೈದು ಕೊಡುವವರು ಯಾರು ? ಕಮ್ಮಿ ರೇಟು ಯಾಕೆ ಇಡಲಿಲ್ಲ ?

(ನಿಮ್ಮ ಪ್ರಶ್ನೆ, ಹಾರೈಕೆ, ನಸುಗೋಪಗಳ ಹಿಂದೆ ಇರುವ ಕಳಿಕಳಿಗೆ ಕೃತಜ್ಞತೆ—ಸಂ)



### ಸಂಪಾದಕರಿಗೊಂದು ಪ್ರಶ್ನೆ

ಏನು ಸಿದ್ಧಿ ಉಪಾಧ್ಯರೆದ್ದಿರಿ.
ದೇನು ಪತ್ರಿಕೆಗಲ್ಲಲೇ ತಾ
ನೇನು ಮಹದಾಕಾಂಕ್ಷೆ ಬಯಸಿದಿರೇನು ಕೀರ್ತಿಯನು
ವೈನತೇಯನ ನವಗಡಿಪವಿಷ
ವೇನು ಸದರವೆ ಹಾವಡಿಗರಿಗಿ
ದೇನು ನಿಮ್ಮುತ್ಸಾಹ ?

### ಸಂಪಾದಕರ ಮನವಿ

ನೀವು ಸೈರಿಸಿ ನಿಮ್ಮ ಕಾರು
ಣ್ಯಾವಲೋಕನವುಂಟಲೇಸ
ದ್ಭಾವದಲಿ ನೀವ್ ರಚಿಸಿದಾಶೀರ್ವಾದ ಶಕ್ತಿಯಲಿ
ನಾವು ವಿಜಯರು !

# ತಿಂಗಳ ಹಳೆಯ ಜೋಕು

ಆಫ್ರಿಕಾದ ಕಾಡುಗಳಲ್ಲಿ ತಿರುಗಾಡಿ ಬಂದ ಸಾಹಸಿಯೊಬ್ಬ (ಸದ್ಯದಲ್ಲಿ ಆತ ಸರ್ಕಸ್ ಬಫೂನ್) ಭರ್ಜರಿ ಸಂಸ್ಥೆಯೊಂದರ ಸಭೆಯಲ್ಲಿ ಭಾಷಣ ಮಾಡುತ್ತಿದ್ದ.

"ನಾನು ಸಮಭಾಜಕ ವೃತ್ತದ ಕಾಡಿನಲ್ಲಿ ಒಮ್ಮೆ ಕಾಡಾನೆಗಳ ಕೈಯಿಂದ ಪಾರಾಗಿ ಓಡುತ್ತಿದ್ದೇನೆ. ಎದುರಿಗೆ ಒಂದು ಸಿಂಹ ಬಂತು. ಅದರಿಂದ ತಪ್ಪಿಸಿಕೊಂಡು ಹೋಗುವಾಗ ಒಂದು ಹೆಬ್ಬಾವು ನನ್ನನ್ನು ನುಂಗಿತು. ಅದರ ಹೊಟ್ಟೆಯನ್ನು ಕಠಾರಿಯಿಂದ ಸೀಳಿ ಮುಂದಕ್ಕೆ ಹೋದೆ. ಅನೇಕ ವನ್ಯಮೃಗಗಳು ಅಟ್ಟಿಸಿಕೊಂಡು ಬಂದವು. ಒಂದು ನದಿ ಕಾಣಿಸಿತು. ಅದರೊಳಕ್ಕೆ ಧುಮುಕಿದೆ. ಅಲ್ಲಿದ್ದ ಮೊಸಳೆಯೊಂದು ನನ್ನನ್ನು ನುಂಗಿತು...." ಸದಸ್ಯನೊಬ್ಬ ಎದ್ದು "ನೀವು ಬದುಕಿದ್ದೀರಲ್ಲಾ ?"ಎಂದು ಕೇಳಿದ. ಸಾಹಸಿ ತಕ್ಷಣ ಕೇಳಿದ "ಇದೂ ಒಂದು ಬದುಕು ಎಂದು ಕರೆಯುತ್ತೀರಾ ?"

(ಆಧಾರ)

—ಮಂದಗೆರೆ ಸೋಮು

ಕಬ್ಬನ್ ವನದಲ್ಲಿ ರಂಗುರಂಗಿನ ಅಂದವಾದ ಚಿಟ್ಟೆಹುಳುವನ್ನು ಕಂಡೆ ಎಂದು ಒಬ್ಬರು ಬರೆದಿದ್ದಾರೆ.

—ರಂಗು ಚಿಟ್ಟೆ ಹುಳುವಿನ ಮೇಲಿತ್ತೋ, ಹಾರುತ್ತಿದ್ದ ಸೆರಗಿನ ಮೇಲೋ ಎಂಬುದನ್ನು ವಿವರಿಸಿಲ್ಲ.

(ಕೊರವಂಜಿಯಿಂದ)

ಎಂಟು ವಯಸ್ಸಿನಲ್ಲಿ, ಹಾಗೂ ಹದಿನೆಂಟರಲ್ಲಿ ಹುಡುಗ ಹುಡುಗಿಯರು ಒಟ್ಟಿಗೆ ಓದಬಹುದಾದರೆ ೧೦-೧೪ರಲ್ಲಿ ಯಾಕೆ ಬೇಡ ಎಂದರಂತೆ.

—ಎಂಟಕ್ಕೆ ದಂಟು ಅಂತಾರೆ– ಹದಿನೆಂಟಕ್ಕೆ ನೆಂಟು ಆಗಬಹುದು, ಆದರೆ ೧೦-೧೪ ರಲ್ಲಿ ಗಂಟು ಆಗಬಾರದು ಅಂತ.

(ಕೊರವಂಜಿಯಿಂದ)

# ಬೆಂಗಳೂರಿನ ಧನ್ವಂತರಿ ಮೈಸೂರು ಶಿವರಾವ್

ಮತ್ತು

# ಕನ್ನಡಕ್ಕೊಬ್ಬಳೇ ಕೊರವಂಜಿಯ ರಾಮಸ್ವಾಮಯ್ಯ

## ಶಿವರಾವ್ -ರಾ.ಶಿ.

ಈಗ್ಯೆ ಕೆಲವು ವರ್ಷಗಳ ಹಿಂದೆ ಭದ್ರಾವತಿಯಲ್ಲಿ ನಡೆದ ಒಂದು ಕೂಟದಲ್ಲಿ ರಾ.ಶಿ. ಯವರನ್ನು ಸಭಿಕರಿಗೆ ಪರಿಚಯ ಮಾಡಿಕೊಡುವ ಅವಕಾಶ ನನಗೆ ಸಿಕ್ಕಿತ್ತು. ರಾ.ಶಿ. ಯವರನ್ನು ಪರಿಚಯ ಮಾಡಿಕೊಡುವ ನೆಪದಲ್ಲಿ ನನ್ನ ಪರಿಚಯವನ್ನು ನಾನು ಮಾಡಿಕೊಂಡೆನೆಂದು ಹೇಳಬೇಕಾದ್ದಿಲ್ಲ. ಏಕೆಂದರೆ ರಾ.ಶಿ. ಯವರನ್ನು ಅರಿಯದವರಾರು? ನನ್ನ ಪರಿಚಯ ಭಾಷಣ ಮಾಡುತ್ತಾ ನಾನು ಹೇಳಿದ್ದೆ....

"ಪ್ರಪಂಚದಲ್ಲಿ ಅನೇಕ ವೈದ್ಯರುಗಳು ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟು ಸಾಹಿತ್ಯ ಸೃಷ್ಟಿಯಲ್ಲಿ ಯಶಸ್ಸು ಪಡೆದಿದ್ದಾರೆ. ಹೆಸರಾಂತ ಇಂಗ್ಲೀಷ್ ಸಾಹಿತಿಗಳಾದ ಆರ್ಥರ್ ಕಾನನ್‌ಡಾಯಲ್, ಸಮರ್‌ಸೆಟ್ ಮಾಮ್, ಆಲಿವರ್ ಗೋಲ್ಡ್ ಸ್ಮಿತ್, ರಿಚರ್ಡ್ ಗಾರ್ಡನ್–ಇವರೆಲ್ಲರೂ ವೈದ್ಯಕೀಯ ಡಿಗ್ರಿ ಪಡೆದವರು. ಅವರ ಬರಹಗಳು ಅವರಿಗೆ ಹಣ ಮತ್ತು ಯಶಸ್ಸುಗಳನ್ನು ಗಳಿಸಿಕೊಡಲು ಶುರುಮಾಡಿದ ತಕ್ಷಣ–ತಮ್ಮ ವೈದ್ಯಕೀಯ ಕ್ಷೇತ್ರವನ್ನು ತ್ಯಜಿಸಿದರು. ಡಾಕ್ಟರ್ ಶಿವರಾಮ್ ಹಾಗೆ ವೈದ್ಯಕೀಯ ವೃತ್ತಿಯನ್ನೂ ಯಶಸ್ವಿಯಾಗಿ ನಡೆಸಿಕೊಂಡು, ಜೊತೆಗೆ ಅಂತರಾಷ್ಟ್ರೀಯ ಮಟ್ಟದ ಸಾಹಿತ್ಯವನ್ನೂ ಸೃಷ್ಟಿಸಿದವರು ತುಂಬ ಅಪರೂಪ. ಇಂದು–ಬೆಂಗಳೂರಿನಲ್ಲಿ ಒಂದಲ್ಲ ಒಂದು ಬಾರಿ ಡಾ. ಶಿವರಾಮ್ ಅವರಲ್ಲಿ ಚಿಕಿತ್ಸೆ ಪಡೆಯದ ಕುಟುಂಬವಿಲ್ಲವೆಂದು ಹೇಳಬಹುದು. ಜೊತೆಗೆ ಜ್ಞಾನಪೀಠ ಪ್ರಶಸ್ತಿಗೆ ಯೋಗ್ಯವಾದ ಸಾಹಿತ್ಯ ಸೃಷ್ಟಿಸಿದ್ದಾರೆ."

ಈ ಮಾತುಗಳನ್ನು ನಾನು ತುಂಬು ಹೃದಯದಿಂದ ತುಂಬು ಭಕ್ತಿಯಿಂದ ಹೇಳಿದ್ದೆ. ಏಕೆಂದರೆ ಅವರಿಂದ ಚಿಕಿತ್ಸೆಯನ್ನೂ ಪಡೆದಿದ್ದೆ. ಬರೆಯುವುದನ್ನೂ ಕಲಿತಿದ್ದೆ.

ನಾನು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಮೊದಲ ಬಾರಿಗೆ ಡಾ. ಶಿವರಾಮ್ ಅವರ ಪರಿಚಯವಾಯ್ತು. ಬಿ.ಎ. ಎಂ.ಬಿ.ಬಿ.ಎಸ್. ಡಿಗ್ರಿಗಳನ್ನು ಪಡೆದು ಬಳೇಪೇಟೆ ಮೆಜೆಸ್ಟಿಕ್ ಪಕ್ಕದಲ್ಲಿ ತಮ್ಮ ಸಿಟಿ ಡಿಸ್ಪೆನ್ಸರಿ ಎಂಡ್ ಲೇಬೋರೇಟರಿ ಸ್ಥಾಪಿಸಿದರು. ಸುಬೇದಾರ್ ಛತ್ರಂ ರಸ್ತೆಯಲ್ಲಿ-ಈಗ ಕಪಾಲಿ ಸಿನಿಮಾ ಇರುವ ಜಾಗದಲ್ಲಿದ್ದ "ಭದ್ರಾಶ್ರಮ"–ನಮ್ಮ ಮನೆ.

ನಾನು ಮೆಡಿಕಲ್ ಸ್ಕೂಲಿನಲ್ಲಿ ಓದಿ ವೈದ್ಯನಾದೆ. ನನ್ನ ಮಿತ್ರ ಡಾ. ಶಿವರಾಮ್ ಅವರ ಸಂಪರ್ಕ ಬೆಳೆಯಿತು. ಕೆಲಕಾಲ ಅವರು ಡಾ. ಮಹದೇವನ್ ಅವರ ಜೊತೆಯಲ್ಲಿ ನಡೆಸಿದ ನರ್ಸಿಂಗ್ ಹೋಮ್‌ನಲ್ಲಿ ವೈದ್ಯನಾಗಿ ಕೆಲಸವೂ ಮಾಡಿದ್ದೆ.

"ಕೊರವಂಜಿ" ಶುರುವಾಯ್ತು. ಒಂದು ದಿನ-'ನೀನೂ' ಏನಾದರೂ ಬರಿಯೋ-ಅಂದರು. 'ನನಗೆ ಅಭ್ಯಾಸವೇ ಇಲ್ಲ'–ಅಂದೆ. 'ಅಭ್ಯಾಸವಿಲ್ಲದ ಕಾರ್ಯಗಳನ್ನು ಬೇಕಾದಷ್ಟು ಮಾಡ್ತೀಯಲ್ಲಾ— ಬರೆಯೋದು ಅಭ್ಯಾಸ ಮಾಡಿಕೋ' –ಅಂದರು. •ಏನು ಬರೀಲಿ ಸರ್'?– ಅಂದೆ. 'ಕಂಡದ್ದನ್ನು ಬರಿ ನನ್ಹತ್ರ ಮಾತಾಡೋ ಹಾಗೇ ಬರಿ' ಅಂದರು. ಹಾಗೇ ಬರೆದೆ ಅಚ್ಚು ಹಾಕಿದರು. ಮತ್ತೂ ಬರೆದೆ. ಮೂರು ರೂಪಾಯಿ ಆಮೇಲೆ ಐದು ರೂಪಾಯಿಗಳು– ಪೋಸ್ಟಲ್ ಆರ್ಡರ್‌ನಲ್ಲಿ ಆ ಮೇಲೆ ಮನಿ ಆರ್ಡರ್‌ನಲ್ಲಿ ಅವರಿಂದ ಬಂದವು. ಆಮೇಲೆ ಹತ್ತು ರೂಪಾಯಿಗಳೂ ಬಂದವು. "ಕೊರವಂಜಿ" ಯಿಂದ ಬಂದ ಮೊದಲ ಮೂರು ರೂಪಾಯಿನಲ್ಲಿ– ನಮ್ಮ ತಾಯಿ ಹದಿನೈದು ಸೇರು ಅಕ್ಕಿಕೊಂಡು ತಂದರು. ಅಕ್ಕಿ ಪಾಯಸ ಮಾಡಿದ್ದರು. ಆಗಿನ ಮೂರು ರೂಪಾಯಿ–ಇಂದಿನ ಐವತ್ತು ರೂಪಾಯಿ ಸಮವಾಗಿತ್ತು.

ಜೆರೋಮ್ ಕೆ ಜೆರೋಮ್ ಅವರ ತ್ರೀಮೆನ್ ಇನ್ ಎ ಬೋಟ್ ಆ ಕೃತಿಯಿಂದ ಪ್ರಭಾವಿತನಾಗಿ "ಕೊರವಂಜಿ" ಯಲ್ಲಿ "ಯಾತ್ರಿಕರ ಪತ್ರಗಳು" ಶುರು ಮಾಡಿದೆ. ಒಂದು ದಿನ ನಾನು ಮತ್ತು ಶ್ರೀ ನಾ ಕಸ್ತೂರಿಯವರು- ಈಗ ಪುಟಪರ್ತಿಯಲ್ಲಿ ನೆಲೆಸಿದ್ದಾರೆ - ನರ್ಸಿಂಗ್ ಹೋಮ್‌ನಲ್ಲಿ, "ಕೊರವಂಜಿ" ಗಾಗಿ ಬಂದ ಹಸ್ತ. ಪ್ರತಿಗಳನ್ನು ನೋಡುತ್ತಿದ್ದೆವು. ರಾ. ಶಿ. ಯವರು ನನ್ನ ಬೆನ್ನ ಮೇಲೆ ಪೆಟ್ಟುಕೊಟ್ಟು "ನಿನ್ನೆ ಅಸೆಂಬ್ಲೀಲಿ ಮಿನಿಸ್ಟರು ಕೊರವಂಜೀನ ಹರಿದು ಹಾಕಿದ್ರು ಕಣೊ" ಅಂದರು. ನಾನು ಗಾಬರಿಯಿಂದ – "ಯಾಕೆ ಸಾರ್" ಅಂದೆ. "ನೀನು ಯಾತ್ರಿಕರ ಪತ್ರದಲ್ಲಿ ಬರೆದಿರೋದ್ನ ಯಾರೋ ಕೋಟ್ ಮಾಡಿದ್ದರಂತೋ– ಮಿನಿಸ್ಟರಿಗೆ ರೇಗ್ಹೋಯ್ತಂತೆ ಹಾಗೇ ಬರಿತೀರು" – ಅಂದ್ರು ಆ ನನ್ನ "ಪತ್ರ"ದಲ್ಲಿ ಯಾತ್ರಿಕರು ಒಂದು ಹಳ್ಳೀಲಿ –ಭಾವಿಯ ಹತ್ರ ಜಗಳ ಆಗುತ್ತಿದ್ದ ಜಾಗಕ್ಕೆ ಹೋಗ್ತಾರೆ. ಜಗಳಾ ಆಗ್ತಿದ್ದಿದ್ದು ಹರಿಜನರ ನಡುವೆ. ಅದರಲ್ಲೇ- ಬಲಗೈನೋರು ಎಡಗೈನೋರನ್ನು ಭಾವೀಲಿ ನೀರು ಉಪಯೋಗಿಸಲು ಬಿಡುತ್ತಿರಲಿಲ್ಲ. ಈ ಲೇಖನವನ್ನು ಶಾಸಕರೊಬ್ಬರು ಓದಿದ್ದರು. ಮಂತ್ರಿಗಳು ಕೋಪಗೊಂಡು ಆ ಕೊರವಂಜಿಯನ್ನು ಹರಿದು ಹಾಕಿದ್ದರು.

ರಾ.ಶಿ. ಯವರ ಕೊರವಂಜಿ ತನ್ನ 25 ವರ್ಷಗಳ ಅವಧಿಯಲ್ಲಿ ನನ್ನಂತಹ ಎಷ್ಟೋ ಮಂದಿ ಬರಹಗಾರರನ್ನು ಬೆಳೆಸಿದೆ. ಕೊರವಂಜಿ ಬಳಗದವನೆಂದು ಹೇಳಿಕೊಳ್ಳುವಷ್ಟು ಹೆಮ್ಮೆ ಕೊಟ್ಟಿದೆ. ಕೇವಲ ಲೇಖಕರನ್ನು ಸೃಷ್ಟಿಸದೆ ಒಂದು ಪೀಳಿಗೆಯನ್ನು ಸೃಷ್ಟಿಸಿದೆ ಎಂದು ಹೇಳಿದರೆ ಒಳಿತು.

ಕೊರವಂಜಿ ಕಾಡಿಗೆ ಹೋಗಬೇಕಾಯ್ತು?
"ವನಸಿರಿಯೊಳೊಂದಾಗಿ ಹೊರಡುವ ಮುನ್ನ–
ಹೋಗಿ ಬರಲೆ ? - ಎಂದಳು - - –
ಆಕಳಿಸುತ್ತಲೇ ಅಂದ ನೆನಪು – ನೀನಿಲ್ಲಿದ್ದುದ್ದೇ
ನನಗರಿವಿರಲಿಲ್ಲವಮ್ಮ – ಎಂದು"

(ನೆನಪು – ಸುಧಾ– 8- 4– 1979)

ಕನ್ನಡಿಗನೂ ತಪ್ಪು ಮಾಡಿದ ಕೊರವಂಜಿಯೂ ತಪ್ಪುಮಾಡಿದಳು. ಕನ್ನಡಿಗ ಎಂದೂ ಕನ್ನಡ ಪತ್ರಿಕೆಯನ್ನು ಕೊಂಡು ಓದುವ ಹವ್ಯಾಸ ಬೆಳೆಸಿರಲಿಲ್ಲ. ಪುರುಷ ರಿಗಂತೂ ಕನ್ನಡ ಪತ್ರಿಕೆ ಓದಲು ಪುರುಸೊತ್ತೇ ಸಾಲದು. ಕೊರವಂಜಿಯೋ– ಹೆಂಗಸರಿಗೆ ಬೇಕಾದ ಧಾರಾವಾಹಿ, ವಾರಭವಿಷ್ಯ, ಸಿನಿಮಾ ತಾರೆಯರ ಜೀವನ ರಹಸ್ಯಗಳು – ಇವನ್ನು ಪ್ರಕಟಿಸಲಾರದೆ ಹೋದಳು. ಕೊರವನ ವಿಡಂಬನೆ, ಮುಗಿಲು ಹಳ್ಳಿಯ ಪಾಲಿಟಿಕ್ಸ್ ಎಲ್ಲಾ ವ್ಯರ್ಥವಾಗಿ ಹೋಯ್ತು.

ಯಾವ ಲೇಖಕನೂ ತನ್ನ ಕೃತಿಗಳಲ್ಲಿ ರಾ. ಶಿ. ಯವರಷ್ಟು ಸಾಹಿತ್ಯ ಪ್ರಕಾರ ಗಳನ್ನು ಸೃಷ್ಟಿಸಿಲ್ಲವೆಂದು ಹೇಳಬಹುದು, ನಗೆಬರಹ, ವಿಡಂಬನೆ, ಅಣಕವಾಡು, ಆಹಾರ ವಿಜ್ಞಾನ, ಮನೋವಿಜ್ಞಾನ, ಆಧ್ಯಾತ್ಮ– ನಿಮ್ಮ ಆಯ್ಕೆ ನೀವೇ ಮಾಡಿ !

ನಡೆಹಯುವೆ ನಡೆ ಮುಂದಕೀಗ !
ಸಾರವಿಲ್ಲದ ಸುತಸತೀ ವ್ಯಾಮೋಹದಿಂದೂರ
ಸಾರಿ ಹೋಗುವ ನಾವು ಮುಂದಕೀಗ !!
–ಎಂದು ಸಿದ್ಧಾರ್ಥ ಹೇಳಿದರೆ
ನಡೆಯುವೆ ನಡೆ ಮುಂದಕೀಗ !
ಖಾರವಿಲ್ಲದ ಚಲನ ಚಿತ್ರ ವ್ಯಾಮೋಹವಂತೊರೆದು
ಭರದಿ ಪೋಗುವ ಮನೆಗೆ ನಾವು ಈಗ – !!
–ಎಂದು ಎರಡನೇ ಸಿನಿಮಾ ಷೋಕ್ಕೆ ಹೋದವರು ಹೋಗುತ್ತಾರೆ.

(ಕೆಣಕೋಣ ಬಾರ)

ಪ್ರತಿಯೊಬ್ಬ ಮಾನವನಲ್ಲಿಯೂ ಅಷ್ಟಿಷ್ಟು ಮೃಗಗಳ ಅಂಶ ಹುದುಗಿರುತ್ತದೆ. ಸಮಯ ಸಿಕ್ಕಾಗ ಸಂದರ್ಭಗಳ ಒತ್ತಡಕ್ಕೆ ಆ ಮೃಗ ಸ್ವಭಾವ ಹೊರಬರುತ್ತವೆ. ಬೆಕ್ಕಿನ ಗುಣದ ಹೆಣ್ಣು, ತೋಳದಂತಹ ಅತ್ತೆ, ನರಿಯಂತ ಮನುಷ್ಯ, ಹಾವಿನಂತ ಸ್ವಭಾವದ ಗೃಹಸ್ಥ - ಹೇಗೆ ಏಕೆ ನಿರ್ಮಾಣವಾದರು ? ರಾ. ಶಿ. ಯವರ "ಮೃಗಶಿರ"

ಓದಿ ತಿಳಿದು ಕೊಳ್ಳಿ. ತನ್ನ ಮಗಳ ಸಾವಿನಿಂದ ಯಾವ ತಂದೆಯಾದರೂ ಖುಷಿ ಪಡುತ್ತಾನೆಯೆ ? "ಮನೋನಂದನೆ ಏನು ಹೇಳುತ್ತದೆ ಓದಿ. ಕರ್ಣನ ಸೋಲಿಗೆ ನಿಜವಾದ ಕಾರಣ ಭಾರತ ಹೇಳಿದೆಯೆ ? -ಇಲ್ಲ. "ಸಾಕ್ಷಿ ಸಂಕಲಿಕೆ" -ಹೇಳಿದೆ "ಕಾಲ" "ಮನಮಂಥನ" ಗಳಂತಹ ಕೃತಿಗಳನ್ನು ಓದಿ ಅರಗಿಸಿಕೊಳ್ಳಲು ನೀವೇ ಒಂದು ಸಿದ್ಧಿ ಪಡೆಯಬೇಕು.

ಇಂದು ಕರ್ನಾಟಕದಾದ್ಯಂತ ಹೆಸರು ಪಡೆದಿರುವ ಬೆಂಗಳೂರು ವಾಣೀವಿಲಾಸ್ ಆಸ್ಪತ್ರೆಯ ಕಟ್ಟಡ ನಿರ್ಮಾಣಕ್ಕೆ ಡಾಕ್ಟರ್ ಶಿವರಾಮ್ ಅವರು ತಮ್ಮ ವಿದ್ಯಾರ್ಥಿ ದೆಸೆಯಲ್ಲಿಯೇ ಅಪಾರ ಸೇವೆ ಸಲ್ಲಿಸಿದ್ದರು. ಹಿಂದೆ ವಾಣಿವಿಲಾಸ್ ಆಸ್ಪತ್ರೆ ಈಗಿನ ವೈ. ಎಂ. ಸಿ. ಎ. ಕಟ್ಟಡದ ಪಕ್ಕದಲ್ಲಿತ್ತು, ತುಂಬ ಇಕ್ಕಟ್ಟಾದ ಜಾಗ, ಆಸ್ಪತ್ರೆಗೆ ಹೊಸ ಕಟ್ಟಡ ನಿರ್ಮಾಣಕ್ಕಾಗಿ ದಿವಂಗತ ಡಾ.ಎಂ.ಸಿ. ಆಲ್ಬುಕರ್ಕ್ ತುಂಬ ಶ್ರಮ ಪಟ್ಟರು. ಮೆಡಿಕಲ್ ಕಾಲೇಜು ವಿದ್ಯಾರ್ಥಿಯಾಗಿದ್ದ ರಾ.ಶಿ. ದಿವಂಗತ ಟಿ.ಪಿ. ಕೈಲಾಸಮ್ ಮತ್ತು ಸಂಗಡಿಗರಿಂದ ಸಹಾಯಾರ್ಥ ನಾಟಕಗಳನ್ನಾಡಿಸಿ ಸುಮಾರು ಮೂವತ್ತು ಸಹಸ್ರರೂಪಾಯಿಗಳನ್ನು ಒಟ್ಟು ಮಾಡಿಸಿ ಕೊಟ್ಟರು. ಇವತ್ತಿನ ಲೆಕ್ಕಾಚಾರದಲ್ಲಿ ಆರು ಲಕ್ಷ ರೂಪಾಯಿಗಳ ಮೌಲ್ಯ. ಇದು ಆಸ್ಪತ್ರೆಯ ಕಟ್ಟಡಕ್ಕೆ ಮೂಲಾಧಾರವಾಯ್ತು.

ಈಗ ಮೈಸೂರಿನಲ್ಲಿರುವ ಮೆಡಿಕಲ್ ಕಾಲೇಜು ಮೊದಲು ಬೆಂಗಳೂರಲ್ಲೇ ಸ್ಥಾಪಿತವಾಗಿತ್ತು. ವಿಕ್ಟೋರಿಯ ಆಸ್ಪತ್ರೆಯ ಕಾಂಪೌಂಡಿನ, ದೊಡ್ಡಣ್ಣ ಹಾಲ್ ಎದುರು ಮೂಲೆಯಲ್ಲಿ ವಿದ್ಯುತ್ ಇಲಾಖೆಯವರು ಬಿಟ್ಟುಹೋಗಿದ್ದ ಕಟ್ಟಡದಲ್ಲಿ ಶುರು ವಾಗಿತ್ತು. ಮೈಸೂರು ಮಹಾರಾಜ - ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ ಕೋರಿಕೆ ಯಂತೆ ಮೆಡಿಕಲ್ ಕಾಲೇಜು ಮೈಸೂರಿಗೆ ವರ್ಗಾಯಿಸಲ್ಪಟ್ಟಿತು. ಬೆಂಗಳೂರಿನಲ್ಲಿದ್ದ ಮೆಡಿಕಲ್ ಸ್ಕೂಲು ಮುಚ್ಚುವ ಸ್ಥಿತಿಗೆ ಬಂತು. ಆಗ ರಾ. ಶಿ. ಯವರು ಹಗಲಿ ರುಳೂ ದುಡಿದು, ಬೆಂಗಳೂರಿನ ಮೆಡಿಕಲ್ ಕಾಲೇಜು ಸ್ಥಾಪನೆಗೆ ಕಾರಣರಾದರು. ಕೆಲವು ವರ್ಷಗಳು ಬೆಂಗಳೂರು ಮೆಡಿಕಲ್ ಕಾಲೇಜು ಖಾಸಗಿ ಸಂಸ್ಥೆಯಾಗಿದ್ದು ರಾ. ಶಿ. ಯವರು ಕಾಲೇಜಿನ ರಿಜಿಸ್ಟ್ರಾರ್ ಆಗಿದ್ದರು. ಆಮೇಲೆ ಸರ್ಕಾರಕ್ಕೆ ವಹಿಸಿದರು ಆ ಕಾಲೇಜಿನ ಪ್ರಿನ್ಸಿಪಾಲರುಗಳಲ್ಲಿ ಒಬ್ಬರಾಗಿದ್ದ ದಿವಂಗತ ಡಾ|| ಟಿ. ಶೇಷಾಚಲಂ ಅವರು ಒಂದು ಬಾರಿ ಹೇಳಿದ್ದರು- "ಈ ಬೆಂಗಳೂರು ಮೆಡಿಕಲ್ ಕಾಲೇಜಿಗೆ ನ್ಯಾಯವಾಗಿ ಡಾ. ಎಂ. ಶಿವರಾಮ್ ಮೆಡಿಕಲ್ ಕಾಲೇಜ್ (Dr. M. Shivaram Medical College) ಎಂತಲೇ ನಾಮಕರಣ ಮಾಡಬೇಕಾಗಿತ್ತು" — ಅಂತ

ಧನ್ವಂತರಿ– ಮೈಸೂರು ಶಿವರಾಮ್ ಮತ್ತು ಸಾಹಿತ್ಯ ಬ್ರಹ್ಮ ರಾಮಸ್ವಾಮಯ್ಯ ಶಿವರಾಮ್–ಅವರ ಜೀವನ ಮತ್ತು ಸಾಧನೆಗಳನ್ನು ನಾವು ಅವಲೋಕಿಸಿದರೆ– ನಿಜ ವಾಗಿ ಒಬ್ಬ ಮನುಷ್ಯ ತನ್ನ ನಿರ್ದಿಷ್ಟ ವೃತ್ತಿಯೊಂದಿಗೆ ಸಾಹಿತ್ಯ ಕ್ಷೇತ್ರದಲ್ಲೂ ಸಮನಾದ ಸಾಧನೆ ಪಡೆಯಬಹುದೆ ಎನ್ನಿಸುತ್ತೆ. ಪಡೆಯಬಹುದು ಎಂದು ಧೈರ್ಯ ಮಾಡುವವರಿಗೆ ಹೊಸ ಆದರ್ಶ ಚೇತನ ಸಿಗುತ್ತವೆ.

ರಾ. ಶಿ. ಬಹುಕಾಲ ಬಾಳಲಿ–
ಅವರ ಸಾಹಿತ್ಯ ನಿರಂತರ ಬಾಳಲಿ.
"ಆಸೆ ನಿರಾಸೆಗಳ ಹೊತ್ತು
ರಾಶಿ ಕಿಡಿಗಳ ಬಿತ್ತಿ ಪೋಷಣೆಗೈದ
ಕೊರವಂಜಿ ಬೊಮ್ಮ
ರಾ. ಶಿ. ಇಂದೆಮ್ಮ ಭಾಗ್ಯ
ಕನ್ನಡನಾಡ ಸೌಭಾಗ್ಯ" (ನೆನಪು– ಸುಧಾ- 8- 4- 1979)

"ಕೇಫ"

---

# 'ಗಿನೆಸ್ ಕಡತದ ಮೋಹ'

"ಪ್ರಿಯನೆ ಈ ಚುಂಬನ
ಆಯುಷ್ಯಕ್ಕೆ ಹೀನ"
ಎಂದೆನುತ ಹಿಂದಕ್ಕೆ
ತಳ್ಳಿದಾ ಅವಳ
ಬಳಿಸಾರಿ ದಿಟ್ಟಿಸುತ
ಆಕೆಯಾ ವದನ
ಉಸುರಿದನು ಹುಡುಗ ತಾ
ಕೈಪಿಡಿದು ಇದನ:—

"ಮುಹೂರ್ತಂ ಜ್ವಲಿತಂ ಶ್ರೇಯೋ
ನತು ಧೂಮಯಿತಂ ಚಿರ"
ಆರು ದಿನ ನಡೆಸೋಣ
ಚುಂಬನದ ಹೊಡೆತ
ಸೇರಿ ಚಿರವಾಗೋಣ
ಆ ಗಿನೆಸ್ ಕಡತ !

(ಚುಂಬನದ ವಿಶ್ವದಾಖಲೆ ಮುರಿದಾಗ)

—ರಾಮಿ

# ಪುರುಷರ ಹಕ್ಕುಗಳು

( ವಿಚಾರ ಸಂಕಿರಣ )

## ಆರಂಭದ ಆಲೋಚನೆಗಳು

ಪುರುಷರಿಗೆಂಥಾ ಹಕ್ಕುಗಳು ? ಅವರಿಗೇನಾಗಿದೆ ದಾಡಿ (ಅಥವಾ ಧಾಡಿ) ? ಎಂದು ಯಾರಾದರೂ ಸ್ತ್ರೀ ಪಕ್ಷಪಾತಿಗಳು ಅಪಸ್ವರ ಎತ್ತಬಹುದು. ಎತ್ತಲಿ, ಇದು ಪುರುಷಪ್ರಧಾನ ಸಮಾಜ, ಪ್ರತಿಯೊಬ್ಬ ಸ್ತ್ರೀಯೂ ತನ್ನ ಹಕ್ಕುಗಳಿಗೆ ಕಡೆಯ ತೊಟ್ಟು ರಕ್ತ (ಪುರುಷನ ದೇಹದಲ್ಲಿ) ಇರುವವರೆಗೂ ಹೋರಾಡಬೇಕಾದ ಭಯಂಕರ ಪರಿಸ್ಥಿತಿ ಒದಗಿ ಬಂದಿದೆ ಎಂಬ ಕಲ್ಪನೆಗೆ ಅಂತರರಾಷ್ಟ್ರೀಯ ಮಹಿಳಾ ವರ್ಷದಲ್ಲಿ, ಮಹಿಳಾ ಜಾಗೃತಿ ಚಳುವಳಿಯ ದಿನಗಳಲ್ಲಿ, ಎಚ್ಚೆತ್ತ ನಾರಿ ಎತ್ತ ಸಾಗಿದ್ದಾಳೆ ?' ಎಂಬ ಕರಪತ್ರಗಳ ಬಿರುಸಿನ ಪ್ರಚಾರದಲ್ಲಿ ಪ್ರಾಧಾನ್ಯತೆ ದೊರೆತು, ಪುರುಷ ತನ್ನ ಹಕ್ಕುಗಳ ಗತಿಯೇನಾಗಿದೆಯೆಂದು ತುರ್ತಾಗಿ ಚಿಂತಿಸಬೇಕಾದ ಪರಿಸ್ಥಿತಿ ಒದಗಿದೆ. ಪುರುಷ ಒಂದೊಂದಾಗಿ ತನ್ನ ಹಕ್ಕುಗಳನ್ನು ಬಲಿ ಕೊಡುತ್ತಾ ಬಂದಿದ್ದಾನೆಂಬುದು ಐತಿಹಾಸಿಕ ಸತ್ಯ. ಯಾಕೆ ? ದಬ್ಬಾಳಿಕೆಗೆ, ಬಾಯಿಬಡಕತನಕ್ಕೆ, ಮರ್ಯಾದೆಗೆ, ಹೆದರಿ. ನಮ್ಮ ಮುತ್ತಜ್ಜಿ ನೆರೆಮನೆಯ ಗಯ್ಯಾಳಿಯ ಗುಣಗಳನ್ನು ವರ್ಣಿಸುತ್ತಾ ನೆನಪು ಮಾಡಿಕೊಳ್ಳುವ ಗಾದೆಯೊಂದಿದೆ : 'ಬಡ್ಡಿ ಬಾಯಿಗಂಜ್ತೀಯೋ, ದೊಡ್ಡಮ್ಮ ಕೋಡಿ ಗಂಜ್ತೀಯೋ ?' ನಮ್ಮ ಮುತ್ತಜ್ಜಿ ಬಡ್ಡಿ ಮತ್ತು ದೊಡ್ಡಮ್ಮ -ನಾಮಪದಗಳು ಸ್ತ್ರೀಲಿಂಗ, ಏಕವಚನ, ವರ್ತಮಾನಕಾಲ, ನೆನಪಿರಲಿ, ಮತ್ತೆ.

ಪುರುಷ ಕಳೆದುಕೊಂಡ ಮೊಟ್ಟಮೊದಲ ಪ್ರಮುಖವಾದ ಹಕ್ಕೆಂದರೆ ಅಡಿಗೆ ಮನೆ ಹಕ್ಕು. ಹಿಂದೆ ಒಂದಾನೊಂದು ಕಾಲದಲ್ಲಿ ಪುರುಷ ಅಡಿಗೆ ಮನೆಯ ಸರ್ವತಂತ್ರ ಸ್ವತಂತ್ರ ಸಂಪೂರ್ಣ ಸಂಪನ್ನ ಸಾರ್ವಭೌಮನಾಗಿದ್ದ. ಪಾಕಶಾಸ್ತ್ರ ಪ್ರಯೋಗದಲ್ಲಿ ಅನನ್ಯ ಪ್ರಾವೀಣ್ಯತೆಯನ್ನು ಕರಗತ ಮಾಡಿಕೊಂಡಿದ್ದ. ಒಳ್ಳೆಯ ರುಚಿಕಟ್ಟಾದ ಅಡಿಗೆಯುವನು ನಳಪಾಕ, ಭೀಮಪಾಕ ಎಂದು ಚಪ್ಪರಿಸಿಕೊಳ್ಳುವ ಮನಸ್ಸಿನ ಸುಪ್ತ ಭಾಗದಲ್ಲಿ ಗತವೈಭವದ ತುಣುಕು ನೆನಸಿಕೊಳ್ಳುವ ಪ್ರವೃತ್ತಿ ವ್ಯಕ್ತವಾಗುತ್ತದೆಂದು ಮನೋವಿಜ್ಞಾನಿಗಳು ಇನ್ನೂ ಕಂಡು ಹಿಡಿಯದಿದ್ದರೆ ಈಗ ಪ್ರವೃತ್ತರಾಗಬಹುದು. ಸಂಸಾರಕ್ಕೆ ಆಹಾರ ಪದಾರ್ಥಗಳನ್ನು ಒದಗಿಸುವ ಮತ್ತು ಅನನ್ನು ಹದನಾಗಿ

ತಯಾರಿಸುವ ಜವಾಬ್ದಾರಿಯುತ ಕೆಲಸ ಗಂಡಸಿನದಾಗಿತ್ತು. ಈಗ ಒದಗಿಸುವ ಜವಾಬ್ದಾರಿ ಮಾತ್ರ ಉಳಿದಿದೆ. ಯಾವ ದುರ್ದಿನ ಯುವಗಂಡಕಾಲದಲ್ಲೋ ವಿಷ ಘಳಿಗೆಯಲ್ಲೋ ಹೆಣ್ಣೊಬ್ಬಳು ಅಡಿಗೆಮನೆಗೆ ಪಾದಾಕ್ರಾಂತ ಮಾಡಿ ಒಗ್ಗರಣೆ ಹಾಕುತ್ತಿದ್ದ ಗಂಡಿನ ಕೈಯಿಂದ ಸೌಟನ್ನು ಕಸಿದುಕೊಂಡು ಸಾಸಿವೆ ಸಿಡಿದಂತೆ ಪಟಪಟ ಬಾಯಿಮಾಡಿ ಗಂಡನ್ನು ಅಲ್ಲಿಂದ ಉಚ್ಚಾಟನೆ ಮಾಡಿ ತನ್ನ ದುರಾಕ್ರಮಣವನ್ನು ತನ್ನದೇ ಆದ ತರ್ಕದಿಂದ ಸಮರ್ಥಿಸಿಕೊಂಡು ಅಡಿಗೆ ಮನೆಯ ಡಿಕ್ಟೇಟರ್ ಆದಳು. ಈ ಐತಿಹಾಸಿಕ ಘಟನೆಯನ್ನು ಪ್ರೊಫೆಸರ್ ಬಿ. ಎನ್. ಟಾಯ್ ತಮ್ಮ ಸಂಶೋಧನೆಗಳಿಂದ ಕಂಡು ಹಿಡಿದು ತಮ್ಮ ವಿಶ್ವ ವಿಖ್ಯಾತ ಉದ್ಗ್ರಂಥವಾದ 'ದಿ ಡಿಕ್ಲೈನ್ ಅಂಡ್ ಫಾಲ್ ಆಫ್ ದಿ ಮಾಡರ್ನ್ ಮೇಲ್' ('The decline and fall of the modern Male'—Prof. B.N. Toy; Adam & Son, Printers and publishers, Timbactoo; Earth, Solar System, Milky Way.*ನಲ್ಲಿ ಹೃದಯ ವಿದ್ರಾವಕವಾಗಿ ವಿವರಿಸಿದ್ದಾರೆ. ತನಗಿಷ್ಟ ಬಂದದ್ದನ್ನು ತನಗಿಷ್ಟ ಬಂದಷ್ಟು ತನಗಿಷ್ಟ ಬಂದಾಗ ತಿಂದು, ಕುಡಿದು ಆನಂದ ಪಡುತ್ತಿದ್ದ ಗಂಡಸಿನ ಸೌಭಾಗ್ಯ ನಷ್ಟವಾದದ್ದು ಐತಿಹಾಸಿಕ ದುರಂತಗಳಲ್ಲೊಂದು. ತುಂಬಾ ಮುಖ್ಯವಾದುದು ಕೂಡ. ನೀವು ಏನೇ ಹೇಳಿ ನಾವು ನಿಜವಾಗಿ ಅನುಭವಿಸಿ ಆನಂದ ಪಡುವುದು ತಿಂದು ಕುಡಿದಾಗಲೇ ಎಂದು ನನ್ನ ಮತ. ಹಸಿವಾಗಿದ್ದಾಗ ಒಂದು ಸಮೀಚೀನ ಊಟ ಕೊಡುವಂಥ ತೃಪ್ತಿಯನ್ನು, ಮತ್ತೊಮ್ಮೆ ಹಸಿವಾಗಿದ್ದಾಗ ಅಷ್ಟೆ ಸಮೀಚೀನವಾದ ಊಟ ಮಾತ್ರ ಕೊಡಬಲ್ಲದೆಂದು ಯಾರು ಬೇಕಾದರೂ ಪ್ರಮಾಣಮಾಡಿ ಹೇಳಬಹುದು. ಹಿಂದೆ ಗಂಡಸು ಮೈಮುರಿದು ದುಡಿದು, ಕಷ್ಟಪಟ್ಟು ಸಂಪಾದನೆ ಮಾಡಿ, ಕಷ್ಟಪಟ್ಟು ಅಡಿಗೆಮಾಡಿ, ಸುಖವಾಗಿ ತಿಂದು ಆನಂದ ಪಡುತ್ತಿದ್ದರೆ, ಇಂದು ಮೈಮುರಿದು ದುಡಿದು, ಕಷ್ಟಪಟ್ಟು ಸಂಪಾದಿಸಿ, ಕಷ್ಟಪಟ್ಟು ಉಂಡು ಬದುಕಬೇಕಾಗಿದೆ. ಇದು ಶೋಚನೀಯವಲ್ಲದಿದ್ದರೆ ಮತ್ತೇನು ? ಇರಲಿ.

ತನ್ನಿಂದ ಕಸಿಯಲ್ಪಟ್ಟ ಹಕ್ಕುಗಳ ಬದಲಾಗಿ ಅವನು ಪಡೆದ ಪರಿಹಾರವಾದರೂ ಏನು ? ಬಳೆಗಳ ಕಿಂಕಿಣಿ, ಒಮ್ಮೊಮ್ಮೆ ಕಿಲಕಿಲ ನಗು, ಮಲ್ಲಿಗೆ ವಾಸನೆ ಹೊಟ್ಟೆ ತುಂಬಿತೆ ಸ್ವಾಮಿ ? ಪ್ರಮಾಣಮಾಡಿ ಹೇಳಿ. ಅದರ ಸೊಗಸು, ರಸಿಕತೆಯೇ ಬೇರೆ ಎಂದು ಯಾರಾದರೂ ವಾದಿಸಬಹುದು. ಹೌದು, ಅದನ್ನೇ ನಾನು ಹೇಳುವುದು. ಅದೇ ಬೇರೆ, ಇದೇ ಬೇರೆ. ಇಶ್ಯೂಗಳನ್ನು ಮಿಕ್ಸ್ ಮಾಡಿ

---

* 113th Revised, Expanded, modified and Contraversial Edition, 1998 Pp574-575. [out of Print]

ಗೊಂದಲಗೊಂಡು ಸುಳ್ಳು ಸಮಾಧಾನ ತಂದುಕೊಳ್ಳಬಾರದು. ಇತ್ತೀತ್ತಲಾಗಿ ಕೆಲವು ಕಲಿತ, ಪ್ರಜ್ಞಾವಂತ, ಮಾನವೀಯ ಹೆಣ್ಣುಮಕ್ಕಳು ಪುರುಷರಿಂದ ತಮ್ಮ ಜಾತಿಯ ಪೂರ್ವಿಕರು ಬಲಾತ್ಕಾರವಾಗಿ ಕಸಿದು ಕೊಂಡಿದ್ದ ಹಕ್ಕನ್ನು ಮರಳಿ ದಯಪಾಲಿಸುತ್ತಿರುವುದು ಒಂದು ಆಶಾ ಕಿರಣ ಆದರೆ ಇದು ಸಾರ್ವತ್ರಿಕವಾಗದ ಹೊರತು ಪುರುಷನಿಗೆ ನಿಜವಾದ ಅರ್ಥದಲ್ಲಿ ಬಿಡುಗಡೆಯಿಲ್ಲ.

ಸಾಮಾನ್ಯವಾಗಿ ಹೋಟೆಲುಗಳಲ್ಲೆಲ್ಲಾ ಅಡಿಗೆ ತಿಂಡಿ ಮಾಡಲು ಪುರುಷರೇ ನೇಮಕಗೊಂಡಿರುತ್ತಾರೆ. ಅಂದರೆ ಎಲ್ಲಾ ಹೋಟೆಲುಗಳಲ್ಲೂ ಅತ್ಯಂತ ರುಚಿಕಟ್ಟಾದ ತಿನಿಸುಗಳು ತಯಾರಿಸಲ್ಪಡುತ್ತದೆಂದೇನೂ ತಾತ್ಪರ್ಯವಲ್ಲ. ಕೆಲವು ನಿಜವಾದ ಗಂಡಸರು ತಮ್ಮ ಪರಂಪರಾಗತ ಕೌಶಲ್ಯವನ್ನು ಇನ್ನೂ ಉಳಿಸಿಕೊಂಡು ಕೆಲವಾದರೂ ಹೋಟೆಲುಗಳಲ್ಲಿ ತಮ್ಮ ಪ್ರತಿಭೆಯನ್ನು ತೋರಿಸುತ್ತಿದ್ದಾರೆ. ಅದಕ್ಕೇ ಅನೇಕರು ಮನೆಯಲ್ಲಿ ಏನು ತಿಂದರೂ ನಾರಾಯಣಪ್ಪನ ಹೋಟೆಲಿನ ಖಾಲಿ ದೋಸೆ ತಿಂದ ತೃಪ್ತಿ ಸಿಗುವುದಿಲ್ಲವೆಂದು ಪದೇಪದೇ ಅಲ್ಲಿಗೆ ನುಗ್ಗುತ್ತಾರೆ. ಶಿವಪ್ಪನ ಖಾನಾವಳಿಯ ಗಿರಿಮುಟ್ಟುವ ರೊಟ್ಟಿರುಚಿಗೆ ಸರಿಸಾಟಿಯಾವುದಿದೆ? ಇದನ್ನು ಹೆಂಗಸರು ನೆಕ್ಚರಲ್ಲಿ, ನಾಲಿಗೆ ಕೆಟ್ಟ ಚಪಲ ದುಶ್ಚಾಳಿ ಮುಂತಾಗಿ ಹೀಗೆಳೆದರೂ ರುಚಿಬಲ್ಲ ಗಂಡಸು ಕದ್ದಾದರೂ ತನ್ನ ಆಸೆ ಪೂರೈಸಿಕೊಳ್ಳಲು ಹಾತೊರೆಯುತ್ತಾನೆ. ವಿಧಿ, ಗಂಡಸಿಗೆ ಎಂತಹ ದುರ್ಗತಿಬಂತು! ಇಂದಿನ ಅಡಿಗೆ ಮನೆಯ ಒಪ್ಪ ಓರಣಗಳು ಗಂಡಸಿಗೆ ದಿಗ್ಭ್ರಮೆ ಹಿಡಿಸುತ್ತವೆ. ಆಕಸ್ಮಾತ್ ಎಂದಾದರೂ ಕಾಫಿಯೋ, ಉಪ್ಪಿಟ್ಟೋ ಅದೃಷ್ಟಕರಾಳವಾಗಿದ್ದರೆ ಅಡಿಗೆಯೋ ಮಾಡಬೇಕಾದ ಗಂಡಸಿನ ಪರಿಸ್ಥಿತಿ ಶೋಚನೀಯ. ಬಾಲ್ಯದಲ್ಲೇ ಸೆರೆ ಸಿಕ್ಕಿ ಮುಪ್ಪಿನವರೆಗೂ ಜೂ ನಲ್ಲಿ ಗೋಣೀಪಟ್ಟೆಯಂತೆ ಒಣಗಿದ ಸಿಂಹವೊಂದನ್ನು ಮತ್ತೆ ಕಾಡಿನಲ್ಲಿ ಬಿಟ್ಟಾಗ ಅದು ಹೇಗೆ ಒದ್ದಾಡುವುದೋ ಹಾಗೆ ಅಡಿಗೆಮನೆಯಲ್ಲಿ ಗಂಡಸು ಪರಿತಪಿಸಬೇಕಾಗುತ್ತದೆ. ಒಮ್ಮೆ ತನ್ನ ಸ್ವಂತ ಕ್ಷೇತ್ರವಾಗಿದ್ದ, ತನ್ನ ಖಾಸಗಿ ಕೋಟೆಯಾಗಿದ್ದ, ತನ್ನ ಅಧಿಕಾರ ಪೀಠವಾಗಿದ್ದ ಜಾಗದಲ್ಲಿ ಇಂದು ಆತ ಅಪರಿಚಿತ, ಅನ್ಯ ಅನಾಥ.

ಗಂಡುಗಳೇ, ವರದಕ್ಷಿಣೆಯ ಬದಲು ಶಾಶ್ವತವಾದ ಅಡಿಗೆಮನೆ ಅಧಿಕಾರ ಕೇಳಿ. ಹಣ, ಕಾಸು, ವಾಚು, ಸ್ಕೂಟರ್, ಟಿ. ವಿ. ಎಲ್ಲಾ ನಶ್ವರ, ಅಡಿಗೆಮನೆಯ ಭಾಗ್ಯವೇ ಅಮರ. ಎಂದಾದರೂ ನಿಮಗೆ ಅಡಿಗೆ ಮನೆ ಪಾರುಪತ್ಯ ಮಾಡುವ ಅವಕಾಶ ದೊರೆತರೆ ಹೆದರದೆ ಅಡಿಗೆ ಮನೆಗೆ ನುಗ್ಗಿ, ಪ್ರಯಾಣ ಎಷ್ಟೇ ದೂರದ್ದಿದ್ದರೂ ಮೊದಲ ಒಂದು ಹೆಜ್ಜೆಯಿಂದಲೇ ಪ್ರಾರಂಭವಾಗಬೇಕಲ್ಲವೇ ? ಅಂತಹ ಅವಕಾಶಗಳಿಗಾಗಿ ಸರ್ವ ಪ್ರಯತ್ನವನ್ನೂ ಮಾಡಿ. ನಿಮ್ಮ ಹೆಂಡತಿ ತಾನಾಗಿಯೇ ಅಡಿಗೆಮನೆಯನ್ನು ನಿಮಗೆ ಒಪ್ಪಿಸಿದರೆ ಆಕೆಯ ವಿವೇಕವನ್ನು ಗೌರವಿಸಿ. ಅಡಿಗೆಮನೆಯಲ್ಲಿದ್ದುಕೊಂಡು

ಇಷ್ಟು ವರ್ಷಗಳ ಕಾಲ ನಿಮ್ಮ ಮೇಲೆ ದಬ್ಬಾಳಿಕೆ ನಡೆಸಿ ನಿಮ್ಮನ್ನು ಶೋಷಣೆಗೆ ಗುರಿಮಾಡಿದ್ದಳೆಂಬ ಕಾರಣಕ್ಕಾಗಿ ಆಕೆಯ ಮೇಲೆ ಪ್ರತೀಕಾರ ಭಾವನೆಯಿಂದ ಸಾರಿಗೆ ಬೋಗಸೆ ಉಪ್ಪು ಚಟ್ನಿಗೆ, ಡೆಟರ್ಜೆಂಟ್‌ಪೌಡರ್ ಹಾಕಬೇಡಿ. ಹೊಂಸ್ಟೈನ್ಸ್ ಕಾಲೇಜು ಗಳಲ್ಲಿ ನಿಮ್ಮ ಗಂಡುಮಕ್ಕಳಿಗೆ ಹೆಚ್ಚಿನ ಸೀಟುಗಳನ್ನು ಕೊಡಬೇಕೆಂದು ಆಗ್ರಹಿಸಿ ರಾಜಕೀಯ ಒತ್ತಡ ತನ್ನಿ.

ಪುರುಷ ಕಳೆದು ಕೊಂಡ ಮತ್ತೊಂದು ಹಕ್ಕು ಏಕಾಂತತೆ. ಪ್ರೊ. ಬಿ. ಎನ್. ಟಾಯ್ ಹೀಗೆನ್ನುತ್ತಾರೆ :

'To Vie with Man. Woman changed her life-style Completely and adopted the ways of man in personal appearance limb to limb, button to button and glowered at him. to boot. She cut her rich tresses short, took to jeans [ He who loves me, follows me'] and thus Camonfliged invaded. adroitly the general compart-ments of trams and trains. And thus the precious privacry of man was invaded and annihilated'* ಪುರುಷ ಪುರುಷನೊಂದಿಗೆ ಆಪ್ತವಾಗಿ ತೋಡಿಕೊಳ್ಳಬೇಕಾದ ವಿಷಯಗಳೂ ಅಗಣಿತವಾಗಿರುತ್ತದೆ. ಮನೆಯಲ್ಲಿ, ಕೆಲಸಮಾಡುವ ಜಾಗಗಳಲ್ಲಿ. ಸ್ತ್ರೀಯರ ಹಾಜರಿಯಿರುವುದರಿಂದ ಅದು ಸಾಧ್ಯವಾಗುವುದಿಲ್ಲ. ರೈಲಿನಲ್ಲಿ ಟ್ರಾಮಿನಲ್ಲಿ, ಬಸ್ಸಿನಲ್ಲಿ ಸ್ತ್ರೀಯರಿಗೆ ಪ್ರತ್ಯೇಕ ಸ್ಥಳವಿರುವುದರಿಂದ (ಅದು ಅವರ ಬೇಡಿಕೆಗಳಿಂದಲೇ ನಿರ್ಮಿಸಲ್ಪಟ್ಟವು) ಪುರುಷರಿಗೆ ಪ್ರತ್ಯೇಕಸ್ಥಳ ಪ್ರಕೃತಿದತ್ತವಾಗಿ ಬಂದ ಬಳುವಳಿ ಆದನ್ನೇನೂ ಅವನು ಬಯಸಿರಲಿಲ್ಲ. ಆದರೂ ಅದು ದೊರಕಿದಾಗ ಅದನ್ನು ಮಾನ್ಯಮಾಡಿ, ಹಕ್ಕುಗಳಲ್ಲಿ ಒಂದನ್ನಾಗಿ ಪರಿವರ್ತಿಸಿಕೊಂಡಿದ್ದು ಅವನ ಫಿಲಾಸಫಿಕಲ್ ಮನೋವೃತ್ತಿಯ ಕುರುಹು (Philo sophy,that dear delight ! ಇನ್ನೆಲ್ಲಿ ಬಯಸೋಣ?) ತನ್ನ ಏಕಾಂತವನ್ನು ಕಾಪಾಡಿಕೊಳ್ಳುವುದರ ಮೂಲಕವೇ ತನ್ನ ವ್ಯಕ್ತಿತ್ವಸ್ವಂತಿಕೆಯನ್ನು ಸಾಧಿಸಿದ್ದ ಗಂಡಸಿಗೆ ಮರಣಾಂತಿಕ ಆಘಾತವಾದದ್ದು ಹೆಂಗಸು ತನ್ನ ಡಬ್ಬಿಯನ್ನು ತ್ಯಜಿಸಿ ಗಂಡಸಿನ ಡಬ್ಬಿಯನ್ನು ಅತಿಕ್ರಮಿಸಿದಾಗ. ಪುರುಷ ತನ್ನ ಏಕಾಂತದಲ್ಲಿ ಏನೆಲ್ಲ ಸಾಧಿಸಿದ್ದಾನೆ ! ನೆನೆದರೆ ಮೈ ರುಮ್ ಎನ್ನುತ್ತದೆ. ಒಬ್ಬ ವಿಶ್ವವಿಖ್ಯಾತ ನಗೆಬರಹಗಾರ (ಥರ್ಬರ್ ಇರಬೇಕು. ಸರಿಯಾಗಿ ನೆನಪಾಗುತ್ತಿಲ್ಲ) ತನ್ನ ಒಂದು ಕೃತಿಯನ್ನು ತನ್ನ ಹೆಂಡತಿಗೆ ಅರ್ಪಣೆ ಮಾಡುತ್ತಾ ಹೀಗೆ ಹೇಳುತ್ತಾನೆ 'With whose willing Co operation this book could never have been written. ತನ್ನ ಹಕ್ಕುಗಳಿಂದ ವಂಚಿತನಾದ ಪುರುಷ ಇಂದು ವಿಷಣ್ಣವದನನಾಗಿದ್ದಾನೆ.

---

* I bid; Pp 995.

ನಾಗರಿಕತೆ ನಿಟ್ಟುಸಿರು ಬಿಡುತ್ತಿದೆ. ಅದು ಮುಂದೆ ಹೇಗೆ ಅವಸಾನ ಹೊಂದುವು ದೆಂಬ ಸಂಗತಿ ಒಂದು ವಿಷಾದಪೂರಿತ ಆಸಕ್ತಿ ಮಾತ್ರವಾಗಿ ಉಳಿದಿದೆ. ಪುರುಷರ ಮೂಲಭೂತ ಹಕ್ಕುಗಳು ವಿಜೃಂಭಿಸದ ದಿನ; ದುರ್ಗತಿ ತಪ್ಪಿದ್ದಲ್ಲ. ಆದರೂ ಪುರುಷರು ಹತಾಶರಾಗಬೇಕಿಲ್ಲ. ಸ್ತ್ರೀಯರ ಹಕ್ಕುಗಳನ್ನು ಪುನಃ ಪ್ರತಿಷ್ಠಾಪನೆ ಮಾಡುವ ಸಾಮಾಜಿಕ ಕಾಯಕದಲ್ಲಿ ಕೆಲವು ಪುರುಷರು ಹೇಗೆ ದುಡಿಯುತ್ತಿದ್ದಾರೋ ಹಾಗೆ ಪುರುಷರ ಹಕ್ಕುಗಳನ್ನು ಅವರ ಮೇಲೆ ಹೇರುವ ಪವಿತ್ರ ಕಾರ್ಯದಲ್ಲಿ ಕೆಲವು ಎಚ್ಚೆತ್ತ ಮಹಿಳೆಯರೂ ತೊಡಗಿದ್ದಾರೆಂದು ಸಕಾರಣವಾಗಿ ನಂಬಲು ಆಧಾರಗಳಿವೆ. ಅಡಿಗೆಮನೆಯ ಪಾಹಿವಾಟನ್ನು ಗಂಡಿಗೆ ಬಿಟ್ಟುಕೊಟ್ಟ ಮನೋಧರ್ಮದ ಮಹಿಳೆಯರು ಅವನ ಏಕಾಂತವನ್ನೂ ಅವನಿಗೆ ದಯಪಾಲಿಸಲು ಹಿಂಜರಿಯುವುದಿಲ್ಲ. ಮೊನ್ನೆ ಪೇಪರಿನಲ್ಲಿ ಬಂದ ಸುದ್ದಿಯೊಂದು ಗಮನಾರ್ಹ. ಪ್ಲಾಟ್ ಫಾರ್ಮ್ ಬಿಟ್ಟು ಚಲಿಸುತ್ತಿದ್ದ ರೈಲನ್ನು ಹಿಡಿಯಲು ಓಡಿಬಂದ ಪುರುಷನೊಬ್ಬ ತಕ್ಷಣ ಕೈಗೆ ಸಿಕ್ಕ ಡಬ್ಬಿಯ ಬಾಗಿಲನ್ನು ದೂಡಿ ಒಳಬಂದ. ಹಲವಾರು ಜೊತೆ ಕಣ್ಣುಗಳು ಅವನನ್ನು ದಿಟ್ಟಿಸಿದವು. ಒಂದಿಬ್ಬರು 'ಹೋ' ಎಂದು ದನಿ ಎತ್ತಿದರು. ಏದುಸಿರು ಬಿಡುತ್ತಿದ್ದ ಪ್ರಯಾಣಿಕನಿಗೆ ತನ್ನ ಪ್ರಮಾದದ ಅರಿವಾಯಿತು. ಅದು ಹೆಂಗಸರ ಡಬ್ಬಿ. ಇರಲಿ ಮುಂದಿನ, ಸ್ಟೇಷನ್ನಿನಲ್ಲಿ ಇಳಿದು ತನ್ನ ತವರು ಡಬ್ಬಿಗೆ ಹೋಗುತ್ತೇನೆಂದು ವಚನ ಕೊಟ್ಟ. ಹಲವಾರು ಮಹಿಳೆಯರು ಹೋಗಲಿ ಪಾಪ! ಎಂದು ಸುಮ್ಮನಾದರೆ, 'ಹೂ' ಎಂದಿದ್ದ ಮಹಿಳೆಯರಿಬ್ಬರು, ಅವನು ಈಗಲೇ, ಈ ಕೂಡಲೇ ಹೆಂಗಸರ ಡಬ್ಬಿಯಿಂದ ಹೊರಗೆ ಹೋಗಬೇಕೆಂದು ಪಟ್ಟು ಹಿಡಿದರು. ಈ ವೇಳೆಗಾಗಲೇ ರೈಲು ವಿಪರೀತ ವೇಗದಿಂದ ಚಲಿಸುತ್ತಿತ್ತು. ಅವನು ಕಣ್ಣು ಕಣ್ಣು ಬಿಡುತ್ತಾ ನಿಂತಿದ್ದಾಗ 'ಹೋ' ಮಹಿಳೆಯರಿಬ್ಬರೂ ಡಬ್ಬಿಯ ಬಾಗಿಲನ್ನು ತೆರೆದು ಅವನನ್ನು ಕೆಳಕ್ಕೆ ದಬ್ಬಿದರು. ಅವನು ರೈಲಿನಡಿ ಸಿಕ್ಕಿ ತುಕಡ ತುಕಡವಾದ. ಈ ಮಹಿಳೆಯರು ಪುರುಷನ ಹಕ್ಕಾದ ಗಂಡಸರ ಡಬ್ಬಿಯಲ್ಲಿ ಪ್ರಯಾಣ ಮಾಡುವ ಮೂಲಭೂತ ಹಕ್ಕನ್ನು ಅವನ ಮೇಲೆ ಹೇರಿದರು, ಅಷ್ಟೆ. ಆದರೆ ಇಷ್ಟೊಂದು ಕ್ರೂರವಾಗಿ ಹೇರಬೇಕಾಗಿತ್ತೆ ಎಂಬ ಪ್ರಶ್ನೆ ಪುರುಷರ ಮನಸ್ಸಿನಲ್ಲಿ ಬರಬಹುದು. ಅದು ಏನೇ ಇರಲಿ, ಇದರಿಂದ ಪುರುಷಪಕ್ಷ ಪಾತಿಗಳು ಸ್ತ್ರೀ ಸಮುದಾಯದಲ್ಲಿದ್ದಾರೆ ಎಂದು ತಿಳಿದುಬರುತ್ತದೆ. ಅವರ ಸಹಕಾರ, ಸಹಾನುಭೂತಿಗಳನ್ನು ಪುರುಷರು ಎಚ್ಚರಿಕೆಯಿಂದ ಸ್ವೀಕರಿಸಬೇಕು ಅಷ್ಟೆ. ಪ್ರತಿ ಹಕ್ಕಿಗೂ ಒಂದೊಂದು ಜವಾಬ್ದಾರಿ ಅಂಟಿಕೊಂಡೇ ಇರುವುದು ಅನುಲ್ಲಂಘನೀಯ ನಿಯಮ. ಆದರೆ ಜವಾಬ್ದಾರಿಯರಿತು ನಡೆದವನಿಗೆ ಹಕ್ಕುಗಳು ಲಭಿಸದಿದ್ದರೂ ಪರದಲ್ಲಿ ಸದ್ಗತಿ ಖಂಡಿತ.

— ಪೀಪಿ

—0—

## ೧ - ಪುರುಷರ ಹಕ್ಕುಗಳು ಮತ್ತು ಸಂಘಟನೆ

1. ಪುರುಷರ ಹಕ್ಕುಗಳೇನು? ವಿವರಿಸಿ.

ನೀವು ೧೯೮೩ರಲ್ಲಿದೀರೋ ೧೮೮೩ರ ಪ್ರಜೆಯೋ ಎಂದು ಅನುಮಾನ ಬರುತ್ತಿದೆ! ಪುರುಷರು ಹಕ್ಕುಗಳ ಸಿಕ್ಕಿನಿಂದ ಹೊರಬಂದು ಬಹಳಷ್ಟೇ ದಿನಗಳಾದುವಲ್ಲ? ಸರಿ ಸಮಾನತೆ–ಗಂಡು ಹೆಣ್ಣು ಕೊಡುವುದು 'ಯೂನಿಸೆಕ್ಸ್' ಉಡುಪು; ಪ್ಯಾಂಟು ಬನಿಯನ್ನು, ಪೆಡಲ್‌ಪುಷರ್ಸ್ 'ಸ್ಮಾಷ್' ಟೀ ಷರ್ಟ್, ಜೀನ್ಸ್ ಜುಬ್ಬ! ಹೇರ್ ಸ್ಟೈಲ್‌ನಲ್ಲಿ 'ಹರೇ ರಾಮ ಹರೇ ಕೃಷ್ಣ'; ಸಲೂನಿನವ ಕಣ್ಣು ಮುಚ್ಚಿಕೊಂಡು ಇಬ್ಬರಿಗೂ ಒಂದೇ ಮಾದರಿ ಒಂದೇ ಮಟ್ಟಕ್ಕೆ ಕೂದಲು ಕತ್ತರಿಸಿದರಾಯ್ತು.

2. ಸ್ತ್ರೀ, ಪುರುಷನ ಅಧೀನ ಎಂದು ಮನುಸ್ಮೃತಿ ಹೇಳಿದೆ; ಅಂದ ಮೇಲೆ ಪುರುಷ....?

'ಹೆಣ್ಣು ಬಾಲ್ಯದಲ್ಲಿ ತಾಯಿ ತಂದೆಯ ಅಧೀನ, ಯೌವನದಲ್ಲಿ ಗಂಡನಾಶ್ರಯ, ವೃದ್ಧಾಪ್ಯದಲ್ಲಿ ಮಕ್ಕಳ ಆಸರೆ'––ಹೀಗೆಂದ, ಮನು, ಇವತ್ತು ಅದರಲ್ಲಿ ಹೀಗೆ ಬದಲಾವಣೆ ಮಾಡಿಕೊಳ್ಳಿರಿ— 'ಗಂಡು ಬಾಲ್ಯದಲ್ಲಿ ತಂದೆ ತಾಯಿಯ ಅಧೀನ, ಯೌವನದಲ್ಲಿ ಹೆಂಡತಿಯ ಧೀನ, ಇಳಿವಯಸ್ಸಿನಲ್ಲಿ ಮತ್ತೂ ಹೆಂಡತಿಯಾಶ್ರಯ, ವೃದ್ಧಾಪ್ಯದಲ್ಲಿ ವೃದ್ಧಾಶ್ರಮದಾಸರೆ!'

3. ಪುರುಷರ ಸಂಘಟನೆ ಅವಶ್ಯಕವೇ?

ಅವಶ್ಯ ಹೌದು–ಅಡಿಗೆ ಮಾಡುವುದು, ಮಗು ಸಾಕುವುದು, ಮನೆ ಅಚ್ಚುಕಟ್ಟು, –ಇವನ್ನು ಕಲಿಯಲಿಕ್ಕೆ; ಗಂಡ ಹೆಂಡಿರಿಬ್ಬರೂ ಉದ್ಯೋಗಸ್ಥರು ತಾನೇ? ಮೊನ್ನೆ ಪತ್ರಿಕೆಯಲ್ಲಿ ಓದಲಿಲ್ಲವೇ– ಹೆಂಡತಿ ಗಂಡನಿಗೆ ಚೀಟಿ ಬರೆದಿಟ್ಟು ಹೋಗಿದ್ದಳಂತೆ, "ಸಂಜೆ ಏಳು ಗಂಟೆಗೆ ಟಿ.ವಿ.ಯಲ್ಲಿ ನೀವು ಇವತ್ತು ಮಾಡಿಕೊಳ್ಳಬೇಕಾದ ಅಡಿಗೆಯ 'ರಿಸಿಪಿ' ಬರುತ್ತದೆ" ಎಂದು.

4. ಇಂದು, ಮಹಿಳೆಯರನ್ನು ಹೊರತು ಮಾಡಿರುವ ಪುರುಷ ಸಂಘಟನೆ ಇಲ್ಲವೇ ಇಲ್ಲವೇ?

ಇಲ್ಲದೇ ಏನು? ಶಬರಿ ಮಲೆ ಅಯ್ಯಪ್ಪ ಇದ್ದಾನಲ್ಲ!

—ಟಿ. ಸುನಂದಮ್ಮ

# ೨ - ಪುರುಷರ ಹಕ್ಕುಗಳನ್ನು ಕೊಟ್ಟು ಕೈ ತೊಳೆದುಕೊಳ್ಳೋಣ!

ಅಖಿಲ ಭಾರತ ಮಹಿಳಾ ಸಮ್ಮೇಳನ ಮೊನ್ನೆ ಮೊನ್ನೆ ನವದೆಹಲಿಯಿಂದ ಒಂದು ಮನವಿ ಹೊರಡಿಸಿ ಕನ್ಯಾದಾನದ ಪದ್ಧತಿಯನ್ನು ಕೂಡಲೆ ನಿಲ್ಲಿಸುವಂತೆ ಕ್ರಮಕೈಗೊಳ್ಳಬೇಕು ಎಂದು ತನ್ನ ಕಾರ್ಯಕರ್ತರನ್ನು ಕೇಳಿಕೊಂಡಿತು.

'ಕನ್ಯಾ ಪಿತೃತ್ವಂ ಬಹು ವಂದನೀಯಂ' ಎಂಬ ಕಾಲ ಹೋಯಿತು. ಕನ್ಯಾದಾನವೇ ಶ್ರೇಷ್ಠ ಎಂಬ ಭಾವನೆ ಇನ್ನು ತಳವೂರಿರುವುದು ಸರಿಯಲ್ಲ. ಗಂಡಸರೂ ಕೂಡ ಎಚ್ಚೆತ್ತು ತಮ್ಮ ಹಕ್ಕುಗಳಿಗಾಗಿ ಹೋರಾಡುವ ಕಾಲ ಬಂದಿದೆ. ಹೆಚ್ಚಿನ ಸಂಭಾವನೆ ಪಡೆಯುವುದೆಲ್ಲ ವರನೇ ಆಗಿರುವುದರಿಂದದಾನ ಗೊಳ್ಳುವವನು, ಕೊಂಡುಕೊಳ್ಳಲ್ಪಡುವವನು (ವ್ಯಾಕರಣ ಮೇಷ್ಟ್ರು ಕ್ಷಮಿಸಲಿ) ವರನೆ ಅಲ್ಲವೆ? ದಾನ ಮಾಡುವವನ ವರನ ಪಿತೃವೆ ಅಲ್ಲವೆ. ಆದ್ದರಿಂದ ಬಹು ವಂದನೀಯ ಯಾರು? ವರನ ಪಿತೃತಾನೆ!

ಇದು ವರನ ಮತ್ತು ವರ ಪಿತೃಗಳ ಸಮಾಚಾರವಾಯಿತು,

ಗಂಡಸರು ಚಲಾಯಿಸಲೇಬೇಕಾದ ಹಕ್ಕುಗಳು ಇನ್ನೂ ಹಲವಿವೆ. ಅಶನಾರ್ಥ ಪಡೆಯುವ ಹಕ್ಕಂತೂ ಆತನಿಗೆ ಲಭಿಸಲೇಬೇಕು. ಎಲ್ಲ ರಂಗಗಳಲ್ಲಿಯೂ ಮಹಿಳೆಯರಾದ ನಾವು ದುಡಿಯಲು ಮುಂದಾಗಿರುವುದರಿಂದ ಪುರುಷಾಮ್ಯಗಗಳಿಗೆ ಅವಕಾಶ ಕಡಿಮೆಯಾಗುತ್ತಾ ಬಂದಿರುವುದು ಸುಳ್ಳಲ್ಲ. ಆದರಿಂದ ಎಷ್ಟೋ ವೇಳೆ ನಮ್ಮ ದುಡಿಮೆಯನ್ನು ನಂಬಿಯೇ ಗಂಡಸರು ಬದುಕುವಂತಾಗಿದೆ. ಆದ್ದರಿಂದ ಮಹಿಳೆ ಗೋತಾ ಹೊಡೆದರೂ ಮಹನೀಯನ ಬದುಕು ಸರಾಗವಾಗಿ ಸಾಗುವಂತೆ ಏರ್ಪಾಡಾಗಬೇಕಾಗಿರುವುದು ಸಮಂಜಸವೇ. ಮಕ್ಕಳು ನೋಡಿಕೊಳ್ಳುತ್ತಾರೆ ಎಂದು ನಂಬಿದರೆ ಸುಖವಿಲ್ಲ. ಅವರೆಲ್ಲ 'ಮಮ್ಮಿ'ಯ ಘೋಷಣೆಯಿಂದಲೇ ಬೆಳೆದವರೆಂದು ಭಾವಿಸಿರುವುದರಿಂದ ತಮ್ಮ 'ಪಪ್ಪ' ಕೂಳು ದಂಡದ ಆಸಾಮಿ ಎಂಬ ತೀರ್ಮಾನಕ್ಕೆ ಬಂದಿರುತ್ತಾರೆ.

ಇತ್ತೀಚೆಗೆ ಆಂಧ್ರ ಪ್ರದೇಶದ ಹೈಕೋರ್ಟಿನಲ್ಲಿ ತೆಲುಗು ಸಿನಿಮಾ ನಟಿ ಸರಿತಾ ಮತ್ತೆ ಗಂಡನ ಬಳಿಗೆ ಹೋಗಬೇಕಾಗಿಲ್ಲ ಎಂದು ತೀರ್ಪು ನೀಡಿದ್ದೇನೋ ಸರಿಯೇ. ಆದರೆ ಪತಿರಾಯ ವೆಂಕಟಸುಬ್ಬಯ್ಯಗೆ ಬದುಕಲು ಅಶನಾರ್ಥವನ್ನೂ ನ್ಯಾಯಮೂರ್ತಿಗಳು ಕಲ್ಪಿಸಿದ್ದರೆ ಚೆನ್ನಾಗಿತ್ತು.

ನ್ಯಾಯಮೂರ್ತಿ ಚೌದರಿಯವರು ಸಂವಿಧಾನದ 21ನೆಯ ವಿಧಿಯನ್ವಯ ತಾರಾ ಪತ್ನಿಯ ಮೇಲೆ ಬಲವಂತ ಕೂಡದು ಎಂದು ವಿಧಿಸಿದ್ದು ಸರಿಯೇ. ಆದರೆ ತಾರಾಪತ್ನಿಯ ಆದಾಯದ ಇಂತಿಷ್ಟು ಭಾಗ ನಿನಗೆ ಅಂತ ಮೊದಲೇ ತಿಳಿಸಿದ್ದರೆ ಪತಿ ಕೇಸು ಹಿಂದೆ ತೆಗೆದುಕೊಳ್ಳುತ್ತಿದ್ದನೋ ಏನೋ. ಅಂತೂ ಬದುಕುವ ದಾರಿಯ ಬಗ್ಗೆ ಪುರುಷರು ಹೋರಾಡಬೇಕಾದ ಕಾಲ ಬಂದಿದೆ. ಮಹಿಳೆಯರೂ ಅದನ್ನು ಎತ್ತಿ ಹಿಡಿಯುವಷ್ಟು ಔದಾರ್ಯ ತೋರಬೇಕು.

ಇದರ ಜೊತೆಗೆ ಪುರುಷರು ಚಲಾಯಿಸಬೇಕಾದ ಹಕ್ಕುಗಳು ಇನ್ನೂ ಹಲವು ಇವೆ.

ಸಮಾಜದ ಬದಲಾದ ಆರ್ಥಿಕ ಪರಿಸ್ಥಿತಿಯಲ್ಲಿ ಕುಟುಂಬದ ಆದಾಯವನ್ನು ತನ್ನೊಡನೆಯೇ ಇಟ್ಟುಕೊಂಡು ಖರ್ಚನ್ನು ಆತನೇ ನಿಭಾಯಿಸಿಕೊಳ್ಳುವುದು ಮೇಲು. ಇದರಿಂದ ಪುರುಷರಲ್ಲಿ ಆತ್ಮ ವಿಶ್ವಾಸ ಮೂಡುತ್ತದೆ. ಮಾತ್ರವಲ್ಲದೆ ಸ್ತ್ರೀಯ ಮೇಲೆ ಗೂಬೆ ಕೂರಿಸುವ ಪ್ರವೃತ್ತಿಯಿಂದಲೂ ಆತ ಮುಕ್ತನಾಗುತ್ತಾನೆ.

ಇನ್ನು ಮಾರ್ಕೆಟ್ಟಿನಿಂದ ತರಕಾರಿ ತರುವ ಹಕ್ಕು, ಮನೆ ಚೊಕ್ಕಟವಾಗಿಡುವ ಹಕ್ಕು, ಅಡಿಗೆ ಮಾಡಿ ಬಡಿಸುವ ಹಕ್ಕು, ಬೆಳಗ್ಗೆ ಮೊದಲೇ ಎದ್ದು ಬೆಡ್ ಟೀ ತಯಾರಿಸುವ ಹಕ್ಕು, ರಾತ್ರಿ ಹಾಸಿಗೆ ಹಾಕುವ ಹಕ್ಕು, ತಮ್ಮ ಬಟ್ಟೆ ಬರೆಗಳನ್ನು ತಾವೇ ಹುಡುಕಿ ಧರಿಸುವ ಹಕ್ಕು—ಇಂಥ ಅನೇಕ ಹಕ್ಕುಗಳನ್ನು ಪುರುಷರಿಗೆ ಕಲ್ಪಿಸುವುದು ಆಧುನಿಕ ಮಹಿಳೆಯ ಧರ್ಮ ಎಂಬುದನ್ನು ಮರೆಯಬಾರದು.

ಈ ವಿಷಯಗಳಲ್ಲೆಲ್ಲ ಅವರಿಗೆ ಹೋರಾಡಲಿಕ್ಕೆ ಮನಸ್ಸಿಲ್ಲ. ಆದ್ದರಿಂದ ನಾವೇ ಮನಸ್ಸು ಮಾಡಿ ಅವರಿಗೆ ಕೊಡಬೇಕಾದ ಹಕ್ಕುಗಳನ್ನು ಕೊಟ್ಟು ಕೈತೊಳೆದುಕೊಂಡು ಕೃತಾರ್ಥರಾಗುವುದು ಲೇಸು.

—ಗವಾರ ಪ್ರಿಯೆ

## ೩-ಏನು ಏಳ್ತೀರೋ ತಿಳೀಲಿಲ್ಲ

೧. ಪುರುಷರಿಗೆ ಹಕ್ಕುಗಳಿವೆಯೇ?

ಪುರಸ ಅಂದ್ರೆ ತಿಳಿಲಿಲ್ಲ ನಂಗೆ. ಗಂಡಸು ಅಂದ್ರಾ? ಯಾತರ್ದು ಅಕ್ಕು? ಮೂಗ್ನಗೆ ಕಟ್ಗಂತತಲ್ಲ ಅದೇ? ಅದಳ ಮೂಗ್ನಿಗೆ ಯಾವಾಗ್ಲೂ ಸಿಂಬ್ಳನೆ ಸುರಿತಿರ್ತತೆ.

ಅಕ್ಕಿ ಹೆಂಗೆ ಕಟ್ಗಿಂತತೆ? ಬೆಳಿಗ್ಗೆದ್ದು ಬೈಗಿನವರ್ಗೆ ದನ ಕಾಯ್ಕೊಂತ ಹೋಗ್ತತೆ. ನಾನು ಕಂಡರ ಮನೆಗೆ ಬಿಕ್ಸೆ ಎತ್ಗಂತ ಹೋಗ್ತಿನಿ. ಜೋಗವ್ವನ ವೇಸ ಹಾಕಿದ್ರೂ ಇಲ್ಲ. ಜೋಳ್ಗಿ ಹಾಕ್ಕೊಂಡ್ರೂ ಇಲ್ಲ. ಕೂಲಿ ಹೋಗನ ಅಂದ್ರೆ ವರ್ಸಕ್ಕೆಳ್ದು ಮಳೆ ಬಂದ್ರೆ ಬೆಳೆ ಎಲ್ಲಿ? ಕೆರೆ ಹೆಂಗ್ತುಂಬ್ತತೆ? ಕೂಲಿ ಹೆಂಗೆ ಸಿಗ್ತತೆ. ಹಂಗಲ್ಲಾ ಅಂದ್ರ್ಯಾ ಮತ್ತೆಂಗೆ? ಸಿಟ್ಟಿಟ್ಟ ತರ್ಸಬ್ಯಾಡ್ರಿ, ಚಲ್ಲಾಣ ಏರಿಸ್ಗೊಂಡು ಸಿಗರೇಟ್ಸೇದ್ಕೊಂತ ಆಪೀಸ್ಗೆ ಕುತ್ಗಂಗಲ್ಲಪ್ಪ ಬಾಳೇವ್ಯೆತೆ ಇದು ಬಾಳೇವು. ಅಪನ್ಗೇನದಿಕಾರ್ಯೆತೆ? ಅವನ್ಗೇನು ಬೇಕು ಅಂದ್ರ್ಯಾ? ದುಡ್ಮೆ ಬೇಕು. ಹೊಟ್ಟೆ ತುಂಬಲ್ಲ. ಅಲ್ಲಿ ಊರ್ನೆರ ಬೈಗಳು. ಇಲ್ಲಿ ನನ್ನ ಬೈಗಳು. ಬಿಸೀ ಮುದ್ದೆ ಬೇಕು. ಎಂಥದೋ ಬೆಯ್ಸಿ ಹಾಕ್ತಿನಿ. ಅವರಿವ್ರು ಉದ್ಕ ಕೊಡ್ತರೆ. ಅನ್ಮಂತನಂಗಲ್ಲ. ಮೊನ್ನೆ ತಿಮ್ಮಿನೊದ್ದು, ತಿಮ್ಮಿ ಒಂದ್ಕಡೆ ಬೇಯ್ಸಿಗೆಂತಳಿ ಅನ್ಮಂತೊಂದು ಕಡ್ಗೆ. ಅದೊಂದು ಬಾಳೇವೇನು? ಅವಳ್ಗೇನಾಗೆತೆ ಹೇಳ್ಲೇ... .... ಒಳಗಿನ್ನೆಮರು. ಇದು, ಹಂಗಲ್ಲ ಬೈದ್ರೆ ಬಯ್ಸಿಗೆಂತತೆ. ಅದು ಒದ್ರೆ ನಾನು ಒದಿಸ್ಗೆಂತಿನಿ.

೨. ಹಕ್ಕುಗಳ ರಕ್ಷಣೆಗಾಗಿ ಪುರುಷರು ಒಂದಾಗಬೇಕೇ?

ಯಾತರ್ದು ಒಂದಾಗದು? ಯಾರ್ಯಾಲೆ? ಒಬ್ರುನ್ಕಂಡ್ರೆ ಇನ್ನೊಬ್ರಿಗಾಗಲ್ಲ. ಈ ಮಾತಯ್ತಲ್ಲ-ಒಂದಾಗದು- ಇದ್ರಗೇನೋ ಮೋಸೈತೆ. ಗಂಡಸ್ರು ಮ್ಯಾಲೆ ಯಾರು ಯಾಕೆ ಕತ್ತಿಕಟ್ತರೆ? ಗಂಡಸ್ತನ ಕಮ್ಮಿ ಆದ್ರುಲ್ಲೇ ಇನ್ನೊಬ್ರು ಒದೆಯುದು. ಗಂಡಸ್ರು ಹೆಂಗಸ್ರು ಹೊಡ್ದಾಡ್ತ ಅದರೇನು? ಎಂಗಸ್ರ ಕೈ ಮ್ಯಾಲೆ ಆಗೆತೇ? ತಗಿರೀ ಯಾತ್ರ ಮಾತು ನೀವು ಆಡದು. ಗಂಡಸ್ರೆಲ್ಲಾ ಒಂದಾಗಿದ್ರೆ ಇಂಗೆಲ್ಲಾ ಯಾಕಾಗ್ತಿತ್ತು? ಎಲೆಕ್ಸನ್ಯಾಕೆ ನಡಿತಿತ್ತು? ಗಂಡ್ಸು ಅಂದ್ರೇನಂತಿರಿ, ಹೆಂಗ್ಸು ಅವನ್ಹೇಳ್ದಂಗೆ ಕೇಳಹಂಗೆ, ಇರನು, ಅಂತಾನಿಗೆ ಯಾತ್ರ ಹೆದರ್ಕೆ?

೩. ಪುರುಷರ ಹಕ್ಕುಗಳ ರಕ್ಷಣೆಗೆ ಒಂದು ಸಂಘಟನೆ ಆವಶ್ಯಕವೆ?

ಗುಂಪು ಕೂಡ್ಕೊಂಬದು ಅಂತಿರಾ. ಜಾಗಕೊಡಸ್ತಿವಿ ಮನೆ ಕೊಡಸ್ತಿವಿ, ಕೂಲಿ ಹೆಚ್ಗಿ ಕೊಡಸ್ತಿವಿ, ಅಂತ ಬರ್ತರಲ್ಲ ಜನ, ಮೊದ್ಲು ಅವರು ದುಡ್ಡು ಕೇಳ್ತರೆ ಹಂಗೇನಾರ ನೀವು ದುಡ್ಡು ಕೇಳಿದ್ರೆ ಇದಕ್ಕೆ ದುಡ್ಡೆಲ್ಲೈತೆ ಕೊಡಕ್ಕೆ? ಅದೇ ದುಡ್ಡಿದ್ರೆ ಅಚ್ಚೇರು ರಾಗಿ ತಂದು ಒಬ್ರಿಗೆ ಮುದ್ದೆ ಮಾಡಬವ್ದು. ಆದಕ್ಕೇನು ಕಡ್ಮೆ ಆಗೆತೆ? ಗಂಡ ಹೆಂಡ್ತಿಗೆ ಜಗಳ ಹಚ್ಚಕ್ಕೆ ದುಡ್ಡು ಕೇಳ್ತೀರಾ? ನಿಮಗೆ ದುಡ್ಡು ಬ್ಯಾಡೇ? ನನ್ನ ಅಭಿಪ್ರಾಯ ಕೇಳ್ತಿರಾ? ನೋಡ್ರಿ ನಿಮಗೆ ಮಾತಕ್ಕೆ ಬದ್ಕಿಲ್ಲ. ನಮ್ಮಂತರ್ನ ಗೋಳು ಹೊಯ್ಕಂತಿರಿ. ಅಗೋ ಅಲ್ಲಿ ಚ್ಯಾಪೆ ಮ್ಯಾಲೆ ಕುತ್ಗಳ್ರಿ. ನಾನು ಬಾಯಿಗೆ ಬಂದಂಗೆ ಬಯ್ಯದು ನಿಜ. ಒಂದೊಂದ್ಸರ್ತಿ ಮುದ್ದೆ ಕೋಲು ಎತ್ಗೊಂಡು ಹೆದ್ರುಸ್ತಿನಿ. ಆದೂ ಸವ್ಯರೆ ಇಕ್ತತೆ, ಕಯ್ಯಗೆ ದುಡ್ಡಿಲ್ದಾಗ. ಆಮ್ಯಾಲೆ ಸಮಾಧಾನ ತಂದ್ಕಂತತೆ, ಸಂಸಾರ

ಸ್ವಾಮಿ. ಜಗ್ಳ ಇಲ್ದಿದ್ರೆ ಹೆಂಗೆ. ನೀವು ಇವತ್ತು ಪಂಚಾಯ್ತಿ ಹೇಳ್ತಿರಿ. ಬಾಕೀ ದಿವಸಾ ದಿನಾ ಗುದ್ಯಾಡುವಾಗ ಸಮಾಧಾನ ಹೇಳರ್‍ಯಾರು? ನಾವೇ ತಂದ್ಕಂತಿವಿ.

೪. ಹೋರಾಟದ ಸ್ವರೂಪವೇನು?

ಜಗಳಕ್ಕೆ ಬಿದ್ದಮ್ಯಾಲೆ ಪರ್ಸಂಗ ಹೆಂಗೆ ಬರ್ತತೆ ಅಂತ ಏಳಕ್ಕೆ ಬರ್ತತೇನ್ರಿ? ಬಂದದ್ದನ್ನು ಅನುಭೋಗ ಮಾಡ್ಕೆಬೇಕು.

೫. ಪುರುಷರಿಗೆ ಭವಿಷ್ಯವಿದೆಯೇ?

ನಾನೇನು ಭವಿಸ್ಯ ಏಳಕ್ಕೆ ಜೋಯ್ಸ್ರೇ, ಜಂಗಮ್ರೇ? ಗಿಣಿ ಸಾಕಿದಿನೇ? ಕವಡೆ ಪ್ರಸ್ನೆ ಗೊತ್ತೈತೇ? ಎಂಗೆ ಏಳ್ಲಿ ಭವಿಸ್ಯ.

ಒಳ್ಳೆ ಹುಚ್ಚು ನಿಂಗೆ. ಬದುಕೈತೆ ಅದ್ಗೆ ಮನೆಗೆ, ನೀನೂ ಎಲ್ಲಿಗಾರ ಹೋಗಿ ಕೂಲಿಗೆ ದುಡಿ.

—ಮಲ್ಲಜ್ಜಿ

# ೪-ಲೋಕೋದ್ಧಾರದ ಹಂಬಲ ಬಿಡಿ

1) ಪುರುಷರಿಗೆ ಹಕ್ಕುಗಳಿವೆಯೇ?

ಖಂಡಿತವಾಗಿ ಇವೆ. ಬಾಲ್ಯದಲ್ಲಿ ವಿದ್ಯಾರ್ಜನೆ, ಯೌವನದಲ್ಲಿ ಧನಾರ್ಜನೆ, ಅಪರ ಮಧ್ಯವಯಸ್ಸಿನಲ್ಲಿ ಜ್ಞಾನಾರ್ಜನೆ, ಮುಪ್ಪಿನಲ್ಲಿ ಸಂನ್ಯಾಸ.

ವಿವರಣೆ: 1) ಯೌವನದಲ್ಲಿ ಹಣವನ್ನು ದುಡಿಯುವುದಕ್ಕೆ ಅಗತ್ಯವಾದ ಕಸುಬು ಅಥವಾ ಮೋಸವನ್ನು ಕಲಿಯುವುದೇ ವಿದ್ಯೆಯ ಆರ್ಜನೆ.

2) ಹಣವಿಲ್ಲದವನಿಗೆ ಸಮಾಜದಲ್ಲಿ ಜಾಗವೇ ಇಲ್ಲದ್ದರಿಂದ ಹೇಗಾದರೂ ದುಡಿಯಲು ತೊಡಗಲೇಬೇಕಾಗುತ್ತದೆ. ಡ್ರೆಸ್ ಛೇಂಜ್ ಮಾಡುವಂತೆ ಕಸುಬನ್ನು ಛೇಂಜು ಮಾಡಲು ಆಗದಿರುವುದರಿಂದ, ಈಗ ವಿದ್ಯ ನೇವೇದ್ಯವಾಗಿರುವುದರಿಂದ ತಂದೆಯ ಹಣ, ಮಾವನ ಹಣ, ಹೆಂಡತಿ ದುಡಿದ ಹಣ ಇವೆಲ್ಲವೂ ಹಣದ ಆರ್ಜನೆ.

3) ಅಪರ ಮಧ್ಯವಯಸ್ಸಿನಲ್ಲಿ ಮಾನಸಿಕ ಸಮತೋಲನ, ಜೇಬು ಅಥವಾ ಅಕೌಂಟಿನಲ್ಲಿ ದುಡ್ಡು ಇಲ್ಲದಿರುವುದರಿಂದ ಜ್ಞಾನದ ಆರ್ಜನೆ ಅಗತ್ಯ.

4) ದೇಹ ಮುಪ್ಪಾಗಿರುತ್ತದೆ. ಇಂದ್ರಿಯಗಳ ಪಾಟವವಿಲ್ಲದ ಮೇಲೆ ಸಂನ್ಯಾಸ ಕಂಪಲ್ಸರಿ.

ಈ ಎಲ್ಲಿ ಹಕ್ಕುಗಳನ್ನು ಪುರುಷರು ಒಪ್ಪಿಕೊಳ್ಳದೆ ಒಂದೇ ಒಂದು ಹಕ್ಕಿಗಾಗಿ ಇಲ್ಲದ ಸಲ್ಲದ ಸರ್ಕಸ್ ಲಾಗ ಹಾಕುತ್ತಿದ್ದಾರೆ.

ಆ ಹಕ್ಕು ಯಾವುದೆಂದರೆ ಹಕ್ಕುಗಳನ್ನು ನಿರ್ಮಿಸುವ ಹಕ್ಕು.

(2) ಹಕ್ಕುಗಳಿಗಾಗಿ ಸಂಘಟನೆ ಅಗತ್ಯವೇ?

ಅದನ್ನಾದರೂ ಉಳಿಸಿಕೊಳ್ಳುವ ಸಂಭವವೂ ಶೂನ್ಯ. ಏಕೆಂದರೆ ಅವರ ಸಂಘಟನಾ ಸಾಮರ್ಥ್ಯ ಶೂನ್ಯ. ಎಷ್ಟು ಜನ ಹೆಂಗಸರಿರುವರೋ ಅವರ ಹಿಂದೆ ಅಷ್ಟು ಜನ ಗಂಡಸರು ನಿಂತಿದ್ದಾರೆ. ಅಲ್ಲದೆ ಸ್ಥಳೀಯ, ರಾಜ್ಯ ಮಟ್ಟದ, ರಾಷ್ಟ್ರ ಮಟ್ಟದ ಅಭಿನೇತ್ರಿಯರ ಹಿಂದೂ ಅವರೇ ನಿಂತಿದ್ದಾರೆ. ಒಬ್ಬೊಬ್ಬರು ಒಂದು ಯೌವನದಲ್ಲಿ ಹಲವಾರು ಸಂದರ್ಭಗಳಲ್ಲಿ ಹಲವು ಹನ್ನೆರಡಾಗಿ ಹರಿಹಂಚಿ ಹೋಗಿದ್ದಾರೆ. ಇವರು ಸಂಘಟಿತರಾದಾರೇ? ಅದಕ್ಕೇ ಸ್ತ್ರೀಯರಿಗೆ, ಅಂಗವಿಕಲರಿಗೆ, ಕಾರ್ಮಿಕರಿಗೆ, ರೈತರಿಗೆ, ರಾಜಕಾರಣಿಗಳಿಗೆ, ಅಪರಾಧಿಗಳಿಗೆ ಹಕ್ಕುಗಳು ಹುಟ್ಟಿ ಬೆಳೆಯುತ್ತಿವೆಯೋ ಹೊರತು ಪುರುಷರ ಹಕ್ಕುಗಳು ಜೀರ್ಣ, ಶೀರ್ಣ, ದಯನೀಯ, ಕನಿಕರ ತರಿಸುವ ಸ್ಥಿತಿಯಲ್ಲಿರುವುದು.

(3) ಹೋರಾಟವನ್ನು ನಡೆಸಬೇಕೇ?

ಪುರುಷನು ಇಂದಿನ ಸ್ಥಿತಿಯಲ್ಲಿ ಹತಾಶನಾಗಿ ಹೋಗಿರುವುದರಿಂದ ಹೋರಾಟ ಇಂದಿಗೆ ನೂರು ವರ್ಷಗಳ ಹಿಂದೆಯೇ ಆರಂಭವಾಗಬೇಕಾದದ್ದು ಇನ್ನು ಹತ್ತಾರು ದಶಕಗಳವರೆಗೂ ಆರಂಭವಾಗುವ ಸಂಭವವಿಲ್ಲ. ಪುರುಷರ್ಷಭ, ಪುರುಷ ಕೇಸರಿ, ಪುರುಷ ವ್ಯಾಘ್ರರ ಯುಗ ಕಳೆದು ಹೋಗಿ ಪುರುಷ ಸೂಕರ, ಪುರುಷ ಗ್ರಾಮಸಿಂಹ, ಪುರುಹ ಮಹಿಷರ ಹೆಚ್ಚಳವಾಗುತ್ತಿದೆ ಎಂದು ಪ್ರೊ॥ ಡಲ್ ಬ್ರಿಯಾಂಟ್ ಅವರು Whither unman ಎಂಬ ಪುಸ್ತಕದ ಮೊದಲ ಪುಟದ ಹಿಂದಿನ ಪುಟದಲ್ಲೇ ಬರೆದಿದ್ದಾರೆ. ಈ ಪುಸ್ತಕದ ಹಿನ್ನುಡಿ ಮಾತ್ರ ಪ್ರಕಟವಾಗಿದೆ.

(4) ಹೋರಾಟ ಯಾವ ಸ್ವರೂಪವನ್ನು ತಳೆಯಬೇಕು?

ಪುರುಷರು ತಮ್ಮ ಬಾಧ್ಯತೆಗಳನ್ನು ಬೆಳೆಸಿಕೊಳ್ಳುವತ್ತ ಹೆಜ್ಜೆ ಇಡಬಾರದು. ತಮ್ಮ ಹಕ್ಕುಗಳು ಯಾವುವು ಎಂಬುದನ್ನು ಗುರುತಿಸಿಕೊಳ್ಳಬೇಕು. ಬಂದ್, ಘೇರಾವ್, ಕಲ್ಲು ತೂರಾಟ, ಗೋಲೀಬಾರುಗಳತ್ತ ಕಾಲಿಡದೆ ತಮ್ಮ ಗತಿಯೇನು ಎಂಬುದನ್ನು ಕುರಿತು ಚಿಂತಿಸಬೇಕು. ತಾವು ದುಡ್ಡು ತೆರುವ ಗೃಹಿಣಿಯ ಹಿಂಬಾಲಕರಾಗದೆ, ತಮ್ಮ ಆಫೀಸುಗಳ, ದುಡಿಮೆಯ ಚಿಂತೆಯ ಜೊತೆಗೆ ಮೊದಲು ಗೃಹವನ್ನು ವಶಪಡಿಸಿಕೊಳ್ಳಬೇಕು. ನಂತರ ಆಫೀಸನ್ನು, ಲೋಕವನ್ನು ಗೆಲ್ಲಲು ಹೋಗಬೇಕು.

4) ಭವಿಷ್ಯದಲ್ಲಿ ಪುರುಷರ ಪಾತ್ರವೇನು?

ಯಂತ್ರ ಮಾನವರು, ಗಣಕ ಯಂತ್ರಗಳು ಸಾಮಾನ್ಯ ಪುರುಷನಿಗಿಂತ ಹೆಚ್ಚು ಯಶಸ್ವಿಯಾಗಿ ಕೆಲಸ ನಿರ್ವಹಿಸುವುದರಿಂದ ಪುರುಷನಿಗೆ ಮುಂದೆ ಸ್ಥಾನವೇ ಇಲ್ಲದಾಗ ಬಹುದು.

5) ಹಾಗಾದರೆ ಏನು ಮಾಡಬೇಕು?

ಕಾಪುರುಷನಂತೆ ಬಾಳಲು ಸಿದ್ಧನಿರಬೇಕು. ಇಲ್ಲದಿದ್ದರೆ ಸಂಘಟಿತನಾಗಿ ಹೋರಾಡಬೇಕು. ತನ್ನ ಹಕ್ಕುಗಳನ್ನು ಇತರರೇ ನಿರ್ಧರಿಸಿ, ಕಟ್ಟುನಿಟ್ಟಾಗಿ ದಯು ಪಾಲಿಸುವಂತೆ ನೋಡಿಕೊಳ್ಳಬೇಕು. ಲೋಕೋದ್ಧಾರದ ಹಂಬಲ ಬಿಟ್ಟು ತನ್ನನ್ನು ತಾನು ಉದ್ಧಾರ ಮಾಡಿಕೊಳ್ಳಬೇಕು.

—ಶಚಿ

## ೫-ಸಂಘಟನೆ ಸಾಧ್ಯವಿಲ್ಲ

1. ಪುರುಷರಿಗೆ ಹಕ್ಕುಗಳಿವೆಯೇ?

ಇಂತಹ ಪ್ರಶ್ನೆಗಳಿಂದ ಪುರುಷರ ಸ್ಥಾನ(?) ಮಾನ (!) ಗಳಿಗೇ ಧಕ್ಕೆ ಬರುವ ಸಂಭವವಿಲ್ಲವೇ? ಹಿಂದೆ ಪುರುಷರು ಆಳುತ್ತಿದ್ದರು. (ಆಳು = torule ಈಗ ಆಳುಗಳಾಗಿ (ಆಳ್ = hero (ಹಳೆಗನ್ನಡ) servant (ಹೊಸಗನ್ನಡ) ಆಳುತ್ತಿದ್ದಾರೆ. ಎಲ್ಲಿ ಹೋದರೂ ಹೆಂಗಸರಿಗೆ ಪ್ರಿಫರೆನ್ಸ್. ಗಂಡಸರನ್ನು ಕೇಳುವವರೇ ಇಲ್ಲ. Employers ಗಂಡು ಜಾತಿಗೆ ಸೇರಿದ್ದರಿಂದಲ್ಲವೇ ಇದೆಲ್ಲಾ? ಹೆಂಗಸರೇ masters ಆಗಿದ್ದಿದ್ದರೆ! ರೇ ರಾಜ್ಯದಲ್ಲಿ ಗಂಡುಗಳಿಗೇ ಪ್ರಿಫರೆನ್ಸ್ ಸಿಗುತ್ತಿತ್ತೋ ಅಥವಾ ಸ್ತ್ರೀ ರಾಜ್ಯದಲ್ಲಿದ್ದಂತೆ ಆಳ್‌ಗಳ ತಲೆ ಹೋಳ್‌ಗಳಾಗುತ್ತಿತ್ತೋ? ಮುಂದಿನ ಜನ್ಮದಲ್ಲಿ ಹೆಣ್ಣಾಗಿ ಹುಟ್ಟುವಾಸೆ ಹಲವರು ಹುಡುಗರಿಗೆ, ಗಂಡುದಿರಿಗೆ. ಅದೃಷ್ಟಕ್ಕೆ ಅದು ಯಾರೋ ಹೊಣೆಯಂತೆ. ಹಾಗೇ ಹೆಂಗಸರು ಮಾಡುವ ತಪ್ಪುಗಳಿಗೆ ಅಪರಾಧಗಳಿಗೆ ಗಂಡಸರೇ ಹೊಣೆ. ಪುರುಷರೊಬ್ಬರು ನಮಗೆ ಹಕ್ಕು ಎಲ್ಲಿದೇರಿ? ಎಲ್ಲಾ ಜವಾಬುದಾರಿಯೇ ಎಂದರು. ಹೆಣ್ಣನ್ನು ಕಂಡು ಕರ್ತವ್ಯ ಬುದ್ಧಿ ಜಾಗ್ರತವಾಗಿ ಗಂಡು ಹೆಣ್ಣಿಗಾಗಿ ದುಡಿದು ಒದೆ ತಿನ್ನುವ ಹೇಸರಗತ್ತೆಯಾಗಿದ್ದಾನೆ ಎಂದೆಲ್ಲಾ ಅಳಲು ತೋಡಿಕೊಂಡರು.

ಇನ್ನೊಬ್ಬ ಹಿರಿಯರಾದವರು ಹೆಣ್ಣುಗಳ ಉಡುಗೆ ತೊಡಿಗೆ ಮೇಕಪ್ ಆಭರಣ ಗಳಿಗೆ ಖರ್ಚಾಗುವ ಹಣದ ಕಾಲು ಭಾಗವೂ ತಮಗೆ ಪಾಕೆಟ್ ಮನಿಯಾಗಿ ಲಭ್ಯವಾಗು ವುದಿಲ್ಲ ಎಂದರು.

ಏನಾದರೂ ತನಗೆ ಬೇಕಾದುದನ್ನು ತಿನ್ನಬೇಕಾದರೂ ಗಂಡು ಪರಾಧೀನ. ಎಲ್ಲಿಯ ಜೋರು? ಮೇರಿಯ ಕುರಿಮರಿಯಂತೆ ನಡೆದುಕೊಂಡರೇ ಪರಿಣಾಮ ಎಂದು ಅತೃಪ್ತರು ಗೊಣಗಿಕೊಳ್ಳುತ್ತಾರೆ.

ಭೂ ಸವೆತದಷ್ಟೇ ವೇಗವಾಗಿ ಪುರುಷರ ಹಕ್ಕುಗಳೂ ಸವೆಯುತ್ತಿವೆ. ಕಾಡು ಗಳಂತೆ ಪುರುಷರ ಸ್ವಾಮ್ಯಗಳು ಕತ್ತರಿಸಲ್ಪಡುತ್ತಿವೆ ಎಂದು ಹಲವರಿಗೆ ದಿಗಿಲು.

2. ಹಕ್ಕುಗಳಿಗಾಗಿ ಹೋರಾಟ ಅಗತ್ಯವೇ?

ಅಳದೆ ಹೋದರೆ ಮಗನಿಗೂ ಬಡಿಸುವುದಿಲ್ಲ ತಾಯಿ. ಕಲ್ಲುಗಳನ್ನೆಸೆಯದೆ ಯಾವ ಪ್ರದರ್ಶನವೂ, ಚಳವಳಿಯೂ, ಪತ್ರಿಕೆಗಳಲ್ಲಿ ವರದಿಯಾಗುವುದಿಲ್ಲ. ಆದ್ದರಿಂದ ಪುರುಷರು 'Men of the world unite and howl' ಎಂಬ ತತ್ವವನ್ನು ಅನು ಸರಿಸದೆ ವಿಮೋಚನೆ ಹೊಂದುವುದು ಅಸಾಧ್ಯ.

3. ಸಂಘಟನೆ ಸಾಧ್ಯವೇ?

ಪತ್ರಿಕೆಗಳಲ್ಲಿ, ರಾಜಕೀಯದಲ್ಲಿ ಪುರುಷರ ಸತತ ಅವಹೇಳನ ನಡೆಯುತ್ತಿದೆ. ಇದು ಸಹಜ ತಾನೇ? ಅವಹೇಳನವೇ ಇವೆರಡರ ಬಂಡವಾಳ.

ಪುರುಷರು ಸಂಘಟಿತರಾಗುವುದಕ್ಕೆ ಇರುವ ದೊಡ್ಡ ಆತಂಕವೆಂದರೆ ಅವರ ದೌರ್ಬಲ್ಯ. ಅವರೆಲ್ಲರೂ ತಮ್ಮ ತಮ್ಮ ಹೈಕಮ್ಯಾಂಡುಗಳ ಅಪ್ಪಣೆಯಂತೆ ನಡೆಯ ಬೇಕು. ಆದೇಶವನ್ನು ಮೀರಿದರೆ ಮನೆಯಲ್ಲಿ ಮುಷ್ಕರ ಆರಂಭವಾಗಿ ಬಲವಂತದ ನಿರಶನಕ್ಕೆ ಬಲಿಯಾಗಬೇಕು. ಹೀಗಾಗಿ ಸಂಘಟಿತ ಹೋರಾಟವಲ್ಲ ವೈಯಕ್ತಿಕ ಹೋರಾಟವೂ ಸಾಧ್ಯವಿಲ್ಲ ಎನಿಸುತ್ತದೆ.



# ನಮಸ್ಕಾರ ಬೇಕೋ ಬೇಡವೋ

ಅರಿಸ್ಟಾಟಲನೇ ಅಂತ ಕಾಣುತ್ತದೆ. ನಗುವನ್ನು ಕಡಿಮೆ ಅಂತ ವರ್ಗೀಕರಿಸಿ, ರೋದನ ಅಲ್ಲ ದುರಂತವೇ ಹೆಚ್ಚಿನದು ಅಂತ ಹೇಳಿದ್ದು. ಈ ಮೆಕಾಲೆ ಇದ್ದನಲ್ಲ ಅವನೇ ಅಂತ ಕಾಣುತ್ತೆ ಸಂಸ್ಕೃತ ಪ್ರತಿಗಾಮಿ, ಇಂಗ್ಲೀಷೇ ಸರ್ವಸ್ವ, ಇದರಿಂದಲೇ ಭಾರತ ಏಕ್ದಂ ಇಂಪ್ರೂವಾಗುತ್ತೆ ಅಂತ ಹೇಳಿದ್ದು. ಈ ಇಂಗ್ಲಿಷ್ನೋರಿದ್ದಾರಲ್ಲ ಅವರು ಸಾಮ್ರಾಜ್ಯ ಶಾಹಿಗಳು. ಪ್ರಜಾಪ್ರಭುತ್ವ ಇದೆಯಲ್ಲ ಅದು ಕೊಳೆತು ಹೋಗೋಕ್ಕೇ ಇರೋದು, ಜನತೆಯ, ಕಾರ್ಮಿಕರ ಸರ್ಕಾರ ಬಂದರೆ ಈ ವಾಕ್ ಸ್ವಾತಂತ್ರ್ಯ, ಗ್ರೀಕ್ ಸ್ವಾತಂತ್ರ್ಯ ಯಾತರದ್ದೂ ಇರೋಲ್ಲ ಅಂತ ಯಾರೋ ಒಬ್ಬರು ಹೇಳಿದ್ರಲ್ಲಾ ಅವರ ಹೆಸರೇನು? ಅವ್ರು ಒಬ್ರೋ ಏನು ನೂರಾರು ಜನಾನೋ ಜನಾನೋ ಗಿಣಿಗಳೋ ಅದೂ ಮರ್ತು ಹೋಗಿದೆ ಅಥವಾ ಪತ್ತೆ ಹಚ್ಚೋಕಾಗೋಲ್ಲ. ಲೆಚ್ ವ್ಯಾಲೆಸಾ 'ಇದೆಲ್ಲಾ ಬುರುಡೆ ಇದು ಕಾರ್ಮಿಕರ ಸರ್ಕಾರ ಅಲ್ಲ, ಅವರನ್ನ ಹಿಂಡಿ ಹೀರೋಕಿರೋ ದೊಡ್ಡದೊಂದು ಮೆಷಿನ್ನು' ಅಂದನೋ, ಏನಿಲ್ಲವೋ ಅದು ಗೊತ್ತಿಲ್ಲ; ಇನ್ನು ನನ್ನಂಥೋರ್ನ ಯಾರ್ಯಾರು ಏನೇನು ಉಗೀತಾ ಇದಾರೆ, ಮುಂದೇ ಬಂದು ಮುಖಭಂಗ ಮಾಡ್ತಾರೆ ಅನ್ನೋಕ್ಕೆ ಲೆಕ್ಕವೇ ಇಲ್ಲ. ಇದೆಲ್ಲಾ ಏನು ಸೂಚಿಸುತ್ತದೆ ಅಂದರೆ ಅವರವರು ತಮಗೆ ಇಷ್ಟಬಂದ ಹಾಗೆ ಮಾತಾಡ್ತಾ, ಬರೀತಾ, ಇರ್ತಾರೆ. ಗೊತ್ತಿಲ್ಲದ ಜನ, ತಾವು ಬುದ್ಧಿವಂತರೂ ಅಂದ್ಕೊಂಡಿರೋರು, ಇದರ ಪೈಕಿ ಯಾವುದೋ ಒಂದನ್ನು ತಮ್ಮ ನಿಶ್ಚಿತ ನಂಬಿಕೆ ಅಥವಾ ಕನ್ಸಿಡರ್ಡ್ ಕನ್ವಿಕ್ಷನ್ ಅಂದ್ಕೊಂಡಿರ್ತಾರೆ.

ಮದುವೆ ಆದೋರು ಗೃಹಸ್ಥಾಶ್ರಮ ಧರ್ಮವೇ ಶ್ರೇಷ್ಠ ಅಂತಾರೆ. ಲವ್ ಮ್ಯಾರೇಜು ಆದೋರು ಲವ್ವೇ ಎಲ್ಲಾನೂ ಅಂತಾರೆ. ಇನ್ನೂ ಹೆಚ್ಗೆ ಕೈಸುಟ್ಟಿರೋರು ಮ್ಯಾರೇಜಲ್ಲೇ ನಂಬ್ಕೆ ಇಲ್ಲ. ನಮ್ಮ ಲವ್, ಮ್ಯಾರೇಜು ಇತ್ಯಾದಿ ಎಲ್ಲಾ ನಮ್ಮ ವೈಯಕ್ತಿಕ ಪ್ರಶ್ನೆ, ಕೇಳೋರು ಯಾರು, ಕೇಳಿದ್ರೆ ಹೇಳೋರ್ಯಾರು, ಅಂತ ಫ್ರೀ ಆಗಿರ್ತಾರೆ. ಅವರ್ನ ಬೋಹೀಮಿಯನ್ಸ್ ಅಂತಾರಂತೆ ಅಲ್ಲೆಲ್ಲೋ ಅದ್ಯಾರೋ, ಯಾರಿಗೆ ಗೊತ್ತು ಇದೆಲ್ಲಾ. ಇದೆಲ್ಲಾ ಯಾಕೆ ಬಂತು ಅಂದ್ರೆ, ಅರಿಸ್ಟಾಟಲ್ ಇದ್ದನಲ್ಲ ಅವನು ದುರಂತ ನಾಟಕವೇ ಶ್ರೇಷ್ಠ. ಹೀರೋ ಇರ್ತಾನಲ್ಲ ಅವನು ಕೊನೆಗೆ ಫನಾಬಿನ್ ಫನಾ ಅಂತ ನೆಗೀಲೇಬೇಕು, ಹಾಗಾದ್ರೇ ಅದು ಗ್ರೇಟ್ ನಾಟಕ ಅಂದುಬಿಟ್ಟ. ಇಲ್ಲಿ ನಮ್ಮ ಸಂಸ್ಕೃತ ಪಂಡಿತೋತ್ತಮರು ಅದೇನೋ ಅಲಂಕಾರ ಶಾಸ್ತ್ರ ಅಂತ ಬರೆದು ಏನು

ಹೇಳಿದ್ರು ಅಂದ್ರೆ ಯುದ್ಧ, ಜಗಳ, ಬೆಂಕಿ ಡೊಂಬಿ ಕೊಲೆ ದರೋಡೆ ಅದೇನೂ ಬರ ಬಾರದು—ಸ್ಟೇಜಿನ ಮೇಲೆ, ಅಂದು ಬಿಟ್ರು.

ಇನ್ನು ಇಂಗ್ಲಿಷ್ ಎಮ್ಮೆಗಳು, ಕನ್ನಡ ಎಮ್ಮೆಗಳೂ ಅರಿಸ್ಟಾಟಲ್ ಮಾತು ಕೇಳಿ ಈ ಸಂಸ್ಕೃತ ಅಲಂಕಾರ ಶಾಸ್ತ್ರಾನ ಸ್ಟೇಜಿನಿಂದ ಹಚಾ ಮಾಡಿಬಿಟ್ಟರು.

ನಮ್ಮ ಗತಿಯೇನು. ಶೈಲಾಧಿರಾಜತನಯಾ ನಯಯೌ ಶತಸ್ಥೌ ಅನ್ನೋ ಹಾಗೆ ಇತ್ತ ಅರಿಸ್ಟಾಟಲನ್ನು ಕಟ್ಟಿಕೊಳ್ಳಲಾರೆವು ಸಂಸ್ಕೃತ ಬಿಡಲಾರೆವು (ಸಂಸ್ಕೃತ ಬರೋದಿಲ್ಲ ಅನ್ನೋದು ಬೇರೆ ಮಾತು) (ಗ್ರೀಕು ಅಂದರೆ ಲ್ಯಾಟಿನ್ ತಾನೇ?) ಈಗ ನೋಡಿ ಆ್ಯಸ್ ಯು ಲೈಕ್ ಇಟ್, ಟೆಂಪೆಸ್ಟ್ ಮಿಡ್ ಸಮ್ಮರ್ ನೈಟ್ಸ್ ಡ್ರೀಂ ಎಲ್ಲಾ ನಾಪತ್ತೆ. ಆದ್ರೆ ಹ್ಯಾಂಲೆಟ್, ಮ್ಯಾಕ್‌ಬೆತ್ ಇದ್ದೇ ಇದ್ದಾರೆ. ಟ್ರ್ಯಾಜೆಡಿ ನೋಡಿದವನ ಮನಸ್ಸು ನಿರ್ಮಲವಾಗುತ್ತದೆ. ಕೊಳೆ ಹಾರುತ್ತೆ ಅಂದರು. (ಕೆಥಾರ್ಸಿಸ್ ಅಂತಾರಂತೆ ಇದನ್ನ)

ಅದೆಷ್ಟು ಜನ ಹೀಗೆ ಪ್ಯೂರಿಫೈ ಆದರು? ಹಾಗಾದೋರು ಕಡಿದು ಕಟ್ಟೆ ಹಾಕಿದ್ದೇನು? ಕಂಡಂಹಿಡಿಯೋರು ಯಾರು? ಅವರಿಗೆಲ್ಲಾ ಇಂಗ್ಲಿಷ್ ಮೋಹ, ಅದನ್ನು ಪೋಷಣೆ ಮಾಡೋದಕ್ಕೆ ಹಲವಾರು ಪ್ರಕಟಣ ಕಂಪನಿಗಳು ಅವರು ಹೇಳಿ ದ್ದನ್ನು ಕೇಳಿ ಕೇಳಿ ಗಿಣೀಪಾಠ.

ಯಾರಿರ್ಲಿ ಯಾರು ಬಿಡ್ಲಿ ಇರೋತನಕ ನಕ್ರೆ ಏನು ನಷ್ಟ? ಪೇಪರು ತುಂಬಾ ದುರಂತ ಓದಿ ಥೇಟರಿಗೆ ಹೋಗಿ ಅದನ್ನೇ ನೋಡಬೇಕೇ?

ಮನುಷ್ಯರ ಈ ಚಿಲ್ಲರೆ ಸುಖದುಃಖ ಕಂಡು ಶಿವ, ಕೃಷ್ಣ ಸದಾ ನಗೋದಿಲ್ವೇ? ಅರಿಸ್ಟಾಟಲ್ ಇದನ್ನು ಹೇಳೋದಿಲ್ಲ ಅನ್ನೋ ಅನುಮಾನ ನಿಮಗಿದ್ರೆ ಇಗೋ ನಮಸ್ಕಾರ, ಸಂದಿಹಳ್ಳಿ ಪಕ್ಕದ ಗೊಂದಿಹಳ್ಳಿ ಒಳ್ಳೇನಾಗಿದೆ ಗೊತ್ತೇ? ವಾಟರ್‌ಸಪ್ಲೈ ಮಾಡೋದಕ್ಕೆ ಒಂದು ಬೋರ್‌ವೆಲ್ ಇದೆ. ಅದಕ್ಕೆ ಎರಡು ಸಬ್‌ಮರ್ಸಿಬಲ್ ಪಂಪು ಗಳು. ಅವಕ್ಕೆ ಯಾವಾಗಲೂ ಲವ್ ಅಂತ ಕಾಣುತ್ತೆ ಹೃದಯ (ಕಾಯಿಲ್ಗಳು) ಸುಟ್ಟು ಸುಟ್ಟು ಹೋಗುತ್ತೆ, ಮತ್ತೆ ಮತ್ತೆ ರಿಪೇರಿ, ನೀವು ಒಂದನ್ನು ಬಿಟ್ಟು ಒಂದಿರೋದಿಲ್ಲ ಒಟ್ಗೆ ಗೋಡೌನಿನಲ್ಲಿರಿ ಅಂತ ಮೂಲೆಗೆ ಒಗೆದು, ಇನ್ನೊಂದು ಅರ್ಧ ಕೆಪ್ಯಾಸಿಟಿ ಪಂಪು ತಂದು, ಹಾಗೂ ಹೀಗೂ ನೀರು ಕುಡಿಸ್ತಾರೆ ಜನಕ್ಕೆಲ್ಲಾ.

ಈಚೆಗೆ ಈ ಊರಿನಲ್ಲಿ ಎರಡು ಸಂಘ ಹುಟ್ಟಿವೆ. ಇನ್ನು ಉದ್ಘಾಟನೆ ಆಗಿಲ್ಲ ಅನ್ನಿ. ಒಂದರ ಉದ್ಘಾಟನೆಗೆ ನನ್ನ ಕರೆದರು. ಆಗ್ಲಿ ಅಂದೆ. ಯಾತಕ್ಕಪ್ಪ ಈ ಸಂಘ ಗಿಂಘ ಅಂದೆ. 'ಸಮಾಜ ಸೇವೆಸಾ, ನೀವೇ ಬರಬೇಕು. ನಿಮ್ಮನ್ನ ಕಂಡ್ರೆ

ನಮಗೆ ಒಂಥರಾ....... ಅಭಿಮಾನ' ಅಂದರು. ನನ್ನ ಯಾರು ಕರೀಬೇಕು ಅವರ್ನ ಬಿಟ್ರೆ, ಅವರಿಗೆ ನನ್ನ ಬಿಟ್ರೆ ಇನ್ಯಾರು ಸಿಕ್ಕಾರು.

ಸಮಾಜ ಸೇವೆ. ಉದ್ಘಾಟನೆಗೆ ಮೊದಲೇ ಶುರುಮಾಡಿ ಬಿಟ್ರು. ನೀರು ಕುಡಿಸ್ತಾ ಇದ್ದ ಫಿಟ್ಟರನ್ನು ಬಾಯಿಗೆ ಬಂದ ಹಾಗೆ ಬಯ್ದು ಒದ್ದು ಬಿಟ್ಟರು. ಅವನು ಮನೇ ಸೇರಿ ಬಾಗಿಲು ಮುಚ್ಚಿ ಬೋಲ್ಟ್ ಹಾಕಿಕೊಂಡ. ಅಕ್ಕಿ ಐದು ರೂಪಾಯಿ –ತಂದ್ವಿ. ಬೇಳೆ ಎಂಟು ರೂಪಾಯಿ ತಂದ್ವಿ. ಯಾತ್ರಲ್ಲಿ ಹೇಳಿ ಬೇಯಿಸೋದು ಫಿಟ್ಟರ್ ಸಂಜೆಯಾದರೂ ಬಾಗಿಲು ತೆಗೀಲಿಲ್ಲ.

ಈ ಸಮಾಜ ಸೇವೆ ದುರಂತ ಬರೆದರೆ ಹೀರೋ ಯಾರು? ಪ್ಯಾರಿಫೈ ಆಗೋರು ಯಾರು? ನಗ್ತಾ ಇದೀವಿ ಸರ್. ನಂಬಿದರೆ ನಂಬಿ ಬಿಟ್ಟರೆ ಬಿಡಿ. ಇನ್ನೂ ನಿಮಗೆ ಅನುಮಾನವೇ? ಅರಿಸ್ಟಾಟಲ್ ಹೇಳಿಲ್ಲ ಇದನ್ನೆಲ್ಲಾ ಅಂದೀರಾ? ನಿಮಗಿದೋ ಮತ್ತೊಂದು ನಮಸ್ಕಾರ.

—ಜೇಡಿ

# ವಿಡಿಯೋ ಕೋಚಿಗೆ ಟಾಟಾ ಬೇಡ

ಕೋದಂಡುವಿನ ಹೊಸ ಅಳಿಯ ಪುಳಿಕೇಶಿಯನ್ನು ಮುಂಬಯಿ ಬಸ್ಸು ಹತ್ತಿಸಿ ಬರಲು ಇಡಿಯ ಕುಟುಂಬವೇ ಬಸ್‌ಸ್ಟಾಂಡಿಗೆ ಹೋಗಿತ್ತು. ಒಂದು ತಾಸು ತಡವಾಗಿ ಬಂದ ಬಸ್ಸಿನೊಳಗೆ ಹೋಗಿ ಕೂತುಕೊಂಡ. ರಾಜಶ್ರೀವಿಯ ಹೊಸ ಅಳಿಯನಿಗೆ ಬಸ್ಸಿನ ಸುತ್ತ ನೇತುಬಿದ್ದು ಎಲ್ಲರೂ ಟಾ ಟಾ ಮಾಡಿದ್ದೇ ಮಾಡಿದ್ದು. ಆದರೆ ಮನೆಗೆ ಹಿಂದಿರುಗಿದ ಮೇಲೆ ಉಳಿದವರು ಮಜಬೂತು ಬಸ್ಸಿನ ವರ್ಣನೆ ಮಾಡುತ್ತಿದ್ದರೆ ನವ ವಧು ನಾಗು ಮಾತ್ರ ಬಂದವಳೇ ಮಂಚದ ಮೇಲೆ ಹೊರಳಿಕೊಂಡು ಥೇಟ್ ಸಿನಿಮಾ ನಾಯಕಿಯ ಮಾದರಿಯಲ್ಲಿ ದಿಂಬಿಗೆ ಕಣ್ಣೀರುಣಿಸತೊಡಗಿದಳು.

ಮಗಳು ಹೀಗೆ ಬಿಕ್ಕುತಾ ಕಣ್ಣೀರಕೋಡಿ ಹರಿಸೋದನ್ನು ಕಂಡು ಮೊನ್ನೆ ಮೊನ್ನೆ ಮದುವೆ ಮಾಡಿಕೊಟ್ಟ ಹೆತ್ತ ಕರುಳಿಗೆ, ಚುರ್ರ್ ಅನ್ನಿಸದೆ ಇರುತ್ತೆಯೆ? 'ಏನಾಯ್ತಮ್ಮ' ಅಂತ ತಾಯಿ ಬೆನ್ನು ತಟ್ಟುತ್ತಾ ವಿಚಾರಿಸಿದ್ದೇ ವಿಚಾರಿಸಿದ್ದು. ಆದರೂ ನಾಗು ಬಿಕ್ಕೋದನ್ನು ನಿಲ್ಲಿಸಲಿಲ್ಲ.

ಏನೋ ವಿರಹ ವೇದನೆ ಇರಲಿಕ್ಕೂ ಸಾಕು ಅಂತ ಸುಮ್ಮನಾದರೆ ತಾಸೊಂದು ಕಳೆದರೂ ತಲೆ ಎತ್ತಲೊಲ್ಲಳು ಹುಡುಗಿ. ಕೊನೆಗೆ ಗುಟ್ಟು ಕಂಡು ಹಿಡಿದು ತಾಯಿಯ ಕಿವಿಯಲ್ಲಿ ಉಸುರಿದವಳು ಚೋಟಿ ತಂಗಿ ಕಾವೇರಿ. ತಾನು 'ಟಾ ಟಾ' ಮಾಡ್ತಾ ಇದ್ದರೂ ತನ್ನ ಪ್ರಾಣ ಪ್ರಿಯ ತನ್ನ ಕಡೆಗೆ ತಿರಿಗಿ ಕೂಡ ನೋಡಲಿಲ್ಲ ಎಂದು ನಾಗುವಿನ ವ್ಯಥೆ. ಈಗಲೇ ಹೀಗಾದರೆ ಮುಂದೆ ಹ್ಯಾಗೆ ಅಂತ ಆಕೆಯ ಬೇಗುದಿಯನ್ನು ಅಕ್ಕನ ಬಾಯಿ ಬಿಡಿಸುವುದರಲ್ಲಿ ಮಹಾ ಚಾಣಾಕ್ಷೆಯಾದ ಕಾವೇರಿಯೊಡನೆ ತೋಡಿಕೊಂಡಳು. ವಿಷಯ ಕೋದಂಡುವಿನ ಕಿವಿಗೂ ಮುಟ್ಟಲು ತಡವಾಗಲಿಲ್ಲ.

ಕೋದಂಡು ಧಾವಿಸಿ ಬಂದವನೇ ಮಗಳ ಬೆನ್ನು ತಟ್ಟಿ "ಅಯ್ಯೋ ಬೆಪ್ಪೆ, ಅಷ್ಟಕ್ಕೆಲ್ಲ ಅಳೋದೆ? ನಿನ್ನ ಟಾ ಟಾಗಳಿಗೆ ಆತ ಹಲ್ಲು ಕಿರಿಯುದ್ದು, ಕುತ್ತಿಗೆ ಹೊರಗೆ ಹಾಕದೆ ಇದ್ದದ್ದು, ಕೈಯಾಡಿಸದೆ ಕಲ್ಲು ಮೂರ್ತಿಯಾಗಿ ಕೂತದ್ದು ಆತನ ತಪ್ಪಲ್ಲ.... ಬೇಕಿದ್ದರೆ ನೋಡ್ತಾ ಇರು ಇಷ್ಟು ದಪ್ಪ ಕಾಗದ ಬರೀತಾನೆ" ಎಂದೆಲ್ಲ ಸಾಂತ್ವನಕ್ಕೆ ತೊಡಗಿದ ಕೋದಂಡು.

ಪುಳಿಕೇಶಿ ಸೀಟಾಸೀನನಾದೊಡನೆ ಮೈಮರೆತಿದ್ದರ ಗುಟ್ಟು ಅವನಿಗೆ ಹೊಳೆದಿತ್ತು. ಮುನ್ನಾದಿನ ಮುಂಬಯಿ ಬಸ್ಸು ಹತ್ತಿದ ಸಾಹೇಬರೊಬ್ಬರನ್ನು ಕಳಿಸಿ ಕೊಡಲು ಹೋಗಿ ಬಸ್ಸಿನ ಹತ್ತಿರ ಕುತ್ತಿಗೆ ಉದ್ದ ಮಾಡಿದಾಗಲೂ ಆತನಿಗೆ ಅದೇ ಅನುಭವವಾಗಿತ್ತು.

ಹೇಳಿ ಕೇಳಿ ವಿಡಿಯೋ ಕೋಚು. ಸೀಟೇರಿದ ಅಭಿಯಂತರು ಕೊನೇ ಕ್ಷಣದಲ್ಲಾದರೂ ಬಿಲ್ ಯಾವಾಗ ಪಾಸು ಮಾಡುತ್ತೇನೆ ಎಂಬುದನ್ನು ತಿಳಿಸಿಯಾರು ಎಂದು ಕಾದಿದ್ದ ಕೋದಂಡುವಿನ ಕಡೆಗೆ ತಿರುಗಿ ಕೂಡ ನೋಡಲಿಲ್ಲ. ಅವರ ದೃಷ್ಟಿ ಮುಂದುಗಡೆ ನೆಟ್ಟಿತ್ತು. ಈಜು ಉಡುಪಿನ ಬೆಡಗಿ ವಿಡಿಯೋದಲ್ಲಿ ನಾಯಕನೊಡನೆ ಕಣ್ಣು ಮುಚ್ಚಾಲೆಗೆ ತೊಡಗಿರುವಾಗ ಕೋದಂಡುವಿನ ಹುಳಿ ಮೋರೆ ನೋಡೋದಕ್ಕೆ ಅಭಿಯಂತರಿಗೇನು ಗ್ರಹಚಾರವೆ!

ಹೊಸ ಅಳಿಯ ಪುಳಿಕೇಶಿ ಕೂಡ ಅಮಿತಾಭಬಚ್ಚನ್ ಕಿಟಕಿ ಗಾಜು ಒಡೆದು ವಿಳನೇ ಮಾಳಿಗೆಯಿಂದ ನೆಗೆಯುವುದನ್ನು ನೋಡುವುದರಲ್ಲಿ ಮಗ್ನನಾಗಿ ಇಡೀ ಕುಟುಂಬದ ಟಾ ಟಾಗಳಿಗೆ ಕಿವುಡು ಕುರುಡು ಬಡಿದಂತವನಾದರೆ ಆತನ ತಪ್ಪೆ? ಸೀಟೇರುವಾಗಲೇ ವಿಡಿಯೋದಲ್ಲಿ ಅಮಿತಾಭ ಅಂಥ ಕಸರತ್ತು ಮಾಡುತ್ತಿರಬೇಕೇ?.

'ಕರುಣಾಳು ಅಳಿಯನೊಳು ತಪ್ಪಿಲ್ಲ' (ಟಿ.ವಿ. ಕೊಡದಿದ್ದರೂ ಪರವಾ ಇಲ್ಲ ಅಂತ ಮಗಳು ನಾಗಮಣಿಯ ಕೈಹಿಡಿದ ಧೀರನಲ್ಲವೆ ಪುಳಿಕೇಶಿ?) ಎಂಬುದನ್ನು ಮೃಗ

ಗಳಿಗೆ ಮನಗಾಣಿಸಿದಾಗ ನಾಗುವಿನ ಮೋರೆಯಲ್ಲಿ ಮಂದಹಾಸ ಮೂಡಿತು. ಆಮೇಲೆ ನಗು ಹುಚ್ಚು ಹುಚ್ಚಾಗಿ ಹರಿಯಿತು.

ವಿಡಿಯೋ ಕೋಚು ಹತ್ತಿದವರು ಟಾ ಟಾ ಮಾಡಲು ಬಂದವರನ್ನು ಮರೆತರೆ ಅದು ಅವರ ತಪ್ಪಲ್ಲ ಅನ್ನೋದರ ಮರ್ಮ ಅರಿತರೆ ಸಿಟ್ಟು, ದುಃಖ, ದುಮ್ಮಾನಗಳಿಗೆ ಅವಕಾಶವಿರೋದಿಲ್ಲ. 'ಟಾ ಟಾ' ಮಾಡುತ್ತಾ ನಿಲ್ಲೋದರ ಬದಲಿಗೆ ಬಸ್ಸು ಹತ್ತಿಸಿ ಸರಸರ ಬಂದು ಬಿಡೋದೇ ಲೇಸು ಅಂತ ಕೋದಂಡುವಿನ ಸಿದ್ಧಾಂತ —

ರಾಮಿ

---

## ಗೋವಿನ ಹೊಸ ಹಾಡು

ನೆನಪಿದೆಯೇ, ಹಿಂದೊಮ್ಮೆ ನೀವೇ ಹೇಳಿದ್ದು
ಸಂಗೀತ ಸಾಹಿತ್ಯದಲಿ ಆಸ್ಥೆಯಿಲ್ಲದವ ಪಶುವೆಂದು
ಇವ ಹುಲ್ಲು ತಿನ್ನುವುದಿಲ್ಲವಲ್ಲ ಎಂಬ ಕುಂಟ ನೆಪ ಒಡ್ಡಿದ್ದು ?
ಕಾಲ ಮುಂದುವರಿದಿದೆ ಸ್ವಾಮಿ,
ಈಗ ಸಂಶೋಧನೆಯು ಫಲವಾಗಿ
ಉಷ್ಣತೆಯ ಶಮನಕ್ಕಾಗಿ
ಎ. ಬಿ. ಅನ್ನಾಂಗಕ್ಕಾಗಿ
ಮೈ ಹೊಳಪಿಗಾಗಿ
ಹೀಗೆ ಏನೇನಕ್ಕೋ
ಆರಂಭವಾಗಿದೆ ಗರಿಕೆ ಹುಲ್ಲು ಮೇಯುವಿಕೆ
ಈಗಲಾದರೂ ಚಣ ಆಲೋಚಿಸಿ ಹೇಳುವಿರಾ
ನನಗೂ, ನಿಮಗೂ ಏನಂತರ ?
ಹರಿ ಹರೀ ಗೋವು ನಾನು.

ಮಂದಗೆರೆ ಸೋಮು

(ಪಾಶ್ಚಿಮಾತ್ಯ ದೇಶದಲ್ಲಿ ವೈದ್ಯಕೀಯ ಸಂಶೋಧನೆಯಿಂದ, ಮನುಷ್ಯನ ಆರೋಗ್ಯ, ಸೌಂದರ್ಯ ವೃದ್ಧಿಗೆ ಗರಿಕೆ ಹುಲ್ಲು ಸಹಕಾರಿ ಎಂದು ಸಿದ್ಧವಾಗಿದೆ. —ಸುದ್ದಿ)

# ಮದುವೆಯಾಗಬೇಕೆಂದಿರುವ ಗಂಡಿಗೆ

ರಿಸರ್ಚ್ ಮಾಡುತ್ತಿರುವ ಹುಡುಗನಾಗಿ
ಮದುವೆ ಬೇರೆ ಆಗಬೇಕೆಂದು
ಅಲೆಯುತ್ತಿರುವೆಯಂತೆ
ಬೆಲೆ ಕೊಡದಿರು ಓಡಾಟಕ್ಕೆ, ಬಿಡು ಆ ಚಿಂತೆ !

ಬಸ್ಸಿಗೆ, ರೈಲಿಗೆ ಎಷ್ಟು ಖರ್ಚಾದರೂ ಸರಿ
ಬೆಚ್ಚದಿರು ಬೆದರದಿರು
ಬ್ರೀಫ್‌ಕೇಸ್ ಹಿಡಿದು ಸಿದ್ಧನಾಗುವ
ನೂರಾರು ಮನೆಗಳನ್ನು ತಟಬಡಿಯುವ
ಹಂಬಲವ, ಛಲವ ಮರೆಯದಿರು !
ಎಲ್ಲೂ ನಿನ್ನ ಖಚಿತ ನಿಲುವ ತೆರೆಯದಿರು !

ಒಬ್ಬಳಿಗೆ ಮೂಗು ಚೆನ್ನಾಗಿಲ್ಲ
ಇನ್ನೊಬ್ಬಳಿಗೆ ಜಡೆ ಚೆನ್ನಾಗಿಲ್ಲ
ಒಬ್ಬಳಿಗೆ ಏನೇನೂ ಇಲ್ಲ
ಒಬ್ಬಳಿಗೆ ಕಂಠ, ಇನ್ನೊಬ್ಬಳಿಗೆ ಸೊಂಟ
ಎಂದು ಜರಿಯುತ್ತಿರಬೇಕಯ್ಯ ಆಗದನೆಂಟ !

ಎಲ್ಲಾ ಚೆನ್ನಾಗಿದ್ದರೆ
ಮನೆ ಚೆನ್ನಾಗಿಲ್ಲ
ವರದಕ್ಷಿಣೆ ಇಲ್ಲ
ಗ್ರಹ ನಕ್ಷತ್ರ ಕೂಡುವುದಿಲ್ಲವೆಂದು ಗೊಣಗಬೇಕಯ್ಯ
ಸಂಶೋಧನೆಗಣಿಯಾದ ಧೀರ ಭಂಟ !
ಮದುವೆಗೆ ಒಪ್ಪಿಯೇ ಬಿಟ್ಟರೆ
ಇನ್ನೆಲ್ಲಿ ನಿನ್ನ ಈ ಹಕ್ಕು ? ಬೇಟೆ
ಆರಂಭವಾಗುತ್ತದೆ ಅಕ್ಕಿಬೇಳೆ
ಉಪ್ಪು ಸೊಪ್ಪು ತರುವ ಗಾಣದೆತ್ತಿನ ಡ್ಯೂಟಿ !

ಆದ್ದರಿಂದ ನೀನು–
ಮದುವೆಯಾಗುವ ಹುಡುಗಿಯಿದ್ದರೆ
– ಆಸೇತು ಹಿಮಾಚಲದವರೆಗೂ –
ಬರುವೆನೆಂದು ಡಾಣಾ ಡಂಗೂರ ಸಾರು !
ತಿರುಗುತ್ತಲೇ ಇರು ಊರು ಊರು !
ನಾಚಿಕೆ ಏಕೆ ?
ಎಲ್ಲಿದೆ ಅದು ನಾಚಿಕೆ ಎಂಬುದು ?

ನಿನ್ನ ರಿಸರ್ಚೂ ಮುಂದುವರಿಯಲಿ
ಇದೂ ಮುಂದುವರಿಯಲಿ
ಒಂದೇ ಒಂದು ಕುತೂಹಲ, ಬೇಡಿಕೆಯಿದೆ ನನ್ನದು-
ಕೊನೆಯಲ್ಲಾದರೂ ನಿನ್ನ ಮೆಚ್ಚಿಕೆ ತಿಳಿಸು–
ಹುಡುಗಿಯ ಬಗ್ಗೆಯಲ್ಲ-
ಅವರ ಮನೆಗಳಲ್ಲಿ ಮಾಡಿಟ್ಟ ಉಪ್ಪಿಟ್ಟು, ಕೇಸರಿಬಾತ್
ವಾಂಗಿಬಾತ್ ಬೋಂಡಾ ಪೂರಿ ಸಾಗುಗಳ ಬಗ್ಗೆ
ನೀನು ಹೆಚ್ಚು ಮೆಚ್ಚಿ ಗುಳುಂ ಮಾಡಿದ್ದರ ಬಗ್ಗೆ

—ಟಿ.ಆರ್. ರಾಧಾಕೃಷ್ಣ

---

## ಕೆಂಪು ಭಾಷಣಾನೋ ? ಹಸಿರು ಭಾಷಣಾನೋ ?

ವಿನಿ : ಸುನೀ, ಇವತ್ತು ನಮ್ಮಮ್ಮ ಭಾಷಣ ಮಾಡ್ತಾರೆ ಕಣೆ

ಸುನಿ : ಹಾಡ್ಲಿ, ನಾನು ಸ್ಕೂಲಿಂದ ಬಂದ್ಮೇಲೆ ತಿನ್ತೀನಿ. ಕೆಂಪು ಭಾಷಣಾನೋ ಹಸಿರು ಭಾಷಣಾನೋ ? ಹೇಳೆ.

ವಿನಿ : ಪೆದ್ದಿ ಕಣೆ ನೀನು, ಭಾಷಣ ತಿನ್ತಾರೇನೇ? ಒದರ್ತಾರೆ ಅಷ್ಟೆ.

---

# ಕಳವು

ಸಾವುಕಾರರ ಹಿತ್ತಲ ಮನೆಯಲಿ
ಕನ್ನವಾ ಕೊರೆದಾ
ಕಳ್ಳಽ - ಕನ್ನವಾ ಕೊರೆದಾ
ಬಾಗಿಲು ಮುರಿಯದೆ ಬೀಗವ ಒಡೆಯದೆ
ಹಣವೆಲ್ಲಾ ಕದ್ದಾ
ಕಳ್ಳಽ - ಹಣವೆಲ್ಲಾ ಕದ್ದಾ

ಕದ್ದುದ ತಿಳಿದು ಶೆಟ್ಟರು ಎದ್ದು
ಪಟಪಟನೆ ನಡೆದು
ತಾವೇಽ - ಚಟಪಟನೇ ನಡೆದೂ
ಪಿಳಿಪಿಳಿಸುವಾಽ ಗೂರ್ಖನ ಕಂಡು
ಪಟಪಟನೆ ಬೈದು
ತಾವೂ - ಪಟಪಟನೆ ಸಿಡಿದು

ಸೋಫಾ ಮೇಲೆ ಚಾಪೆಯ ಮೇಲೆ
ನೋಟಿನಾಕಂತೆ
ಕಂಡರು ನೋಟಿನಾಕಂತೆ
ಯಾರಿರಬಹುದು ಬೀಗವ ಹೊಡೆ
ಯದಿಲ್ಲೀಗೆ ಬಂದು
ಆಗ - ಇಲ್ಲೀಗೇ ಬಂದೂ

ಪತ್ನಿಯ ಕರೆದು ಕೈಯೊಳಗಿರಿಸಿ
ನೋಟೀನಾಕಂತೆ
ನೂರರ - ನೋಟೀನಾಕಂತೆ
ಕಳುಹಿಸಿಬಿಟ್ಟರು ಜನರನು ಕಂಡು
ಸೆರಗೆಲ್ಲ ಮುಚ್ಚಿ
ಸೀರೆಯ ಸೆರಗೆಲ್ಲಾ ಮುಚ್ಚಿ

ಕಾಣದು ಕಣ್ಣು ತೊದಲಿತು ನಾಲಿಗೆ
ಪಡೆದೀತಾ ದೇಹಾ
ಬೆವರನು ಪಡೆದೀತಾ ದೇಹಾ
ಅರಿಯದು ಕಳವು ಪ್ರೇಮದ ಹಣವು
ಕಾಣಿಸನೇ ಕಳ್ಳಾ
ಕೈಯಿಂಗೆ - ಸಿಕ್ಕಾನೇ ಕಳ್ಳಾ.

( ದಿ॥ಬೇಂದ್ರೆಯವರ ಕ್ಷಮೆ ಕೋರಿ )

ಖುದೂಸ್ ಮಹಾಕವಿ

---

## ಅಜ್ಜ, ನಿಂಗೆ ಹಲ್ಲು ಬರುತ್ತೆ

ಕ್ಯಾತನ ತಮ್ಮ ಸಿಳ್ಳೇಕ್ಯಾತನಿಗೆ ವಿಪರೀತ ಭೇದಿ ಶುರುವಾಯ್ತು. ಕ್ಯಾತ ತನ್ನ ಮುದ್ದು ಮಾತಿನಿಂದ ಅವನ ಅಮ್ಮನ್ನ ವಿಚಾರಿಸಿದ :
" ಸಿಳ್ಳೇಕ್ಯಾತನಿಗೆ ಯಾಕಮ್ಮಾ ಭೇದಿಯಾಗ್ತಿದೆ "
ಅವನ ಅಮ್ಮ ಹೇಳಿದರು :
" ಅವ್ನಿಗೆ ಹಲ್ಲು ಬರುತ್ತೆ ಕಣೋ.....ಅದಕ್ಕೇ "
ಕೆಲ ದಿನಗಳ ನಂತರ ಕ್ಯಾತನ ಬೊಚ್ಚು ಬಾಯಿ ಅಜ್ಜನಿಗೂ ಭೇದಿ ಆವರಿಸಿತು. ಸೂಕ್ಷ್ಮವಾಗಿ ಗಮನಿಸಿದ ಕ್ಯಾತ ಅಜ್ಜನಿಗೆ ಹೇಳಿದ :
" ಅಜ್ಜ ನಿಂಗೆ ಹಲ್ಲು ಬರುತ್ತೆ, ಅದಕ್ಕೇ ನಿನಗೆ ಭೇದಿಯಾಗ್ತಿದೆ. "

---

# ಸತ್ಯಂ-ಶಿವಂ-ಸುಂದರಂ

"ಏಯ್ ರಾಮಾನುಜಾ– ಮಾದ್ವಾ– ಶಂಕರ್–ನೀವು ಶ್ರೀಮಂತಸ್ತರು ದನಾಕಾಯು ಲಿಕ್ಕೆ ಲಾಯಕ್ಕು — ನಾಸಿಲ್ಲಿ ಗಟ್ಸ್ಲಿ ಹರಿಯೋ ಹಾಗೆ ಹೊಡ್ಕೋತಿರೋದು ಯಾತಕ್ಕೆ? ಯಾರಿಗೆ? ಶುದ್ಧ ಅಯೋಗ್ಯ ಹುಡುಗರು.... .. ಏನ್ರೋ ನೀವು ಕಿಸಿಕಿಸಿ ನಗ್ತಾ ಕಿಟ್ಕೀಲಿ ನೋಡ್ತಿರೋದು........ಬೊಗಳೋ ಏ ವಿಶಿಷ್ಟಾದ್ವೈತ ರಾಮಾನುಜಾ........ ಬೊಗಳು..."

ಹಿಸ್ಟ್ರಿ ಮೇಸ್ಟ್ರು ಮಾದೇವಯ್ಯನವರು ಕಿಡಿಕಿಡಿ ಆಗಿದ್ದರು. ಕಿಟಕಿಯಲ್ಲಿ ಆಗ ತಾನೆ ಬಳುಕುತ್ತಾ ಹೋದ ಗೋಪಿಕಾಳೇ ಕಾರಣ. ಅವಳ ನಡಿಗೆ-ರೂಪ.ಗಾಳಿಗೆ ಹಾರುತ್ತಿದ್ದ ಸೆರಗು ಇವೆಲ್ಲಾ ಸತ್ಯವಾಗಿ ಕಂಡದ್ದು ರಾಮಾನುಜನಿಗೆ, ಸುಂದರವಾಗಿ ಕಂಡದ್ದು ಮಧ್ವಾಚಾರಿಗೆ, ಆಹ 'ಶಿವಾ-ಶಿವಾ' ಎಂದು ಹಲುಬಿದವನು ಶಂಕರ. ಸತ್ಯಂ-ಶಿವಂ-ಸುಂದರಂ. ಪ್ರತ್ಯಕ್ಷ ಕಂಡಾಗ ಆದ ಆನಂದಕ್ಕೆ ಮೂವರೂ ಕಿಸಿ–ಕಿಸಿ ನಕ್ಕರು. ಈ ಕೀಚಲು ಗಂಟಲ ಮಾದೇವಯ್ಯನ ಚರಿತ್ರೆ ಬೋರು-ಶತಬೋರು ಯಾರಿಗೆ ಬೇಕಾಗಿದೆ!...

"ಪಾಯಿಂಟ್ ಆಫ್ ಆರ್ಡರ್ ಸಾರ್...ಹೋಲ್ಡ್ ಯುವರ್ ಟಂಗ್..."
—ಎಂದು ಎದ್ದುನಿಂತವನು ಸಿದ್ಧರಾಮು. ಅವನು ಮುಂದೆ ರಾಜಕೀಯ ಮುಖಂಡನಾಗಿ ವಿಧಾನಸೌಧದವರೆಗೆ ಏರುತ್ತಾನೆಂದು ಇಡೀ ಶಾಲೆಗೆ-ಶಾಲೆಯೇಕೆ ಊರು ಊರೇ ಮಾತಾಡ್ಕೊತಾ ಇತ್ತು. ಸಿದ್ಧರಾಮು ಸಿಡಿದು ನಿಂತಾಗ ಮಾದೇವಯ್ಯನವರು ಸಿಟ್ಟಿನ ಮೂರನೇ ಕಣ್ಣು ಮುಚ್ಚಿ, ಶಾಂತರಾಗಿ ಕತ್ತು ಸರಿಪಡಿಸಿಕೊಂಡು, ಪ್ಯಾಂಟ್ ಜೇಬಿನಿಂದ ಕರವಸ್ತ್ರ ತೆಗೆದು ಹಣೆಯೊರಸಿ, ಗಂಭೀರ, ಶಾಂತ, ಗಂಟಲಿನಿಂದ ಹೇಳತೊಡಗಿದ್ದು ಏನೆಂದರೆ....

"ಅಪ್ಪಾ-ಅಯ್ಯಾ-ಸಿದ್ರಾಮು....ನಿನ್ನ ನಾನು ಮಾತೇ ಆಡಿಸಲಿಲ್ಲವಲ್ಲ... ಕ್ಲಾಸ್ನಲ್ಲಿ ಡಿಸಿಪ್ಲಿನ್ ಬೇಕಪ್ಪಾ....ನೀವೇ ಮುಂದಿನ ಪ್ರಜೆಗಳು.... ನಿಮ್ಮನ್ನು ಸತ್ಪ್ರಜೆ ಮಾಡೋದು ನಮ್ಮ ಕೆಲಸ. ನೀನ್ಯಾಕೆ ಸಿಟ್ಟಿಗೇಳ್ತೀ...."

"ಅವಮಾನ ಮಾಡಿದ್ದೀರಿ ನೀವು...."

"ನಾನು ಬೈದದ್ದು ಆ ರಾಮಾನುಜ-ಮಧ್ವರಾಜ–ಶಂಕರ್-ಇವರಿಗಲ್ವೇನಪ್ಪಾ... ಇದರಲ್ಲಿ ನಿನ್ನ ಪಾಯಿಂಟ್ ಬರೋದೇ ಇಲ್ಲಪ್ಪಾ....ದಯವಿಟ್ಟು ನೀನು ಕೂತ್ಕೋ... ಏಯ್... ರಾಮಾನುಜ...ಮಧ್ವರಾಜ....ನಾನು ಹೇಳಿದ್ದು...ತಿಳೀತೇ...."

—ಎಂದು ಮಹದೇವಯ್ಯನೋರು ತರಗತಿಯನ್ನು ಹತೋಟಿಗೆ ತರಲು ಮತ್ತೆ ಆರ್ಭಟಿಸಲು ಯತ್ನಿಸಿದರು ಸಿದ್ರಾಮು ಕೂಡಲಿಲ್ಲ, ಅವನು ಎದ್ದಾ ಅಂದ್ರೆ ಅವನ ಪಾರ್ಟಿಯವರೆಲ್ಲಾ ಎದ್ದು ನಿಲ್ಲಲೇ ಬೇಕು. ಸಿದ್ರಾಮು ಸಿಡಿದೆದ್ದ.

“ಆ ಮಾತು ಹಿಂದಕ್ಕೆ ತೊಗೊಳ್ಳಿ ... ಇಲ್ಲಾಂದ್ರೆ ಈಗಿಂದೀಗ್ಲೆ ವಾಕೌಟ್ ಮಾಡಿ ಇಡೀ ಕಾಲೇಜು ಸ್ಟ್ರೈಕ್ ಮಾಡಿ ಪ್ರತಿಭಟನೆ ತೋರಿಸಬೇಕಾಗುತ್ತದೆ....” ಎನ್ನುತ್ತಿದ್ದಂತೇ ಯಾರೋ ಘೋಷಣೆ ಕೂಗಿದರು. “ಡೌನ್ ವಿತ್ ಮಹದೇವಯ್ಯ” ಆಚೆ ಈಚೆ ತರಗತಿ ವಿದ್ಯಾರ್ಥಿಗಳು ಹೊರಗೆ ಬರೋದನ್ನ ಆಯಾ ತರಗತಿ ಲಕ್ಚರರುಗಳು, ರೊಚ್ಚಿದ್ದ ಗುಂಪನ್ನು ಹತೋಟಿಗೆ ತರುವ ಪೋಲೀಸರಂತೆ ಯತ್ನಿಸುತ್ತಿದ್ದರು.

ಈ ಸಮಯಕ್ಕೆ ಗಫಾರ್ ಸಾಹೇಬರು ಬಂದರು, ಅವರ ಹಿಂದೆ ಪ್ರಾಂಶುಪಾಲರಾದ ಜೋಸೆಫ್ ಸಾಲೋಮನ್ ಸಾಹೇಬರು ಬಂದರು. ಗಫಾರ್ ಸಾಹೇಬರು ಸಾಲೋಮನ್ ಅವರ ಅಂಗರಕ್ಷಕರು, ಕಾಲೇಜಿನ ಹಿರಿಯ 4ನೇ ದರ್ಜೆ ನೌಕರ ಒಮ್ಮೆ ಪೈಲ್ವಾನ್ ಆಗಿದ್ದವರು.

“ವ್ಹಾಟ್ ಈಸ್ ದಿ ಮ್ಯಾಟರ್ ಮಹದೇವಯ್ಯ..”

—ಎಂದು ಸಾಲೋಮನ್ ಸಾಹೇಬ್ರು ಗತ್ತಿನಿಂದ ಟೈ ಗಂಟನ್ನು ಸರಿಪಡಿಸಿಕೊಳ್ಳುತ್ತಾ ಮಹದೇವಯ್ಯನವರನ್ನು ತಡವಿಕೊಂಡರು. ಸಧ್ಯಕ್ಕೆ ಪ್ರಾಂಶುಪಾಲರ ಆಗಮನದಿಂದ ಕ್ಲಾಸ್ ರೂಮಿನ ಸದ್ದು ಕಡಿಮೆ ಆಯಿತು. ಸಿದ್ರಾಮನ ಕಡೆಯವರು ನಿಂತಿದ್ದರಷ್ಟೆ– ಅವರ ಹಿಂದಿನ ಬೆಂಚಿನಿಂದ ದಿವ್ಯವಾಣಿಯೊಂದು ಎಲ್ಲರಿಗೂ ಕೇಳುವಂತೆ ನುಡಿಯಿತು.

“ಸಾರ್ ಮಹದೇವಯ್ಯನವರು ಕಿಟಿಕೀಲಿ ಗೋಪಿಕಾಳನ್ನು ನೋಡ್ತಾ ರಾಮನಂಜನ್ನ ಬೈದರು... ...” ಅವರು ಮಾತ್ರ ನೋಡಬೇಕು ಬೇರೆಯವರು ನೋಡಬಾರದು ಅನ್ನೊ ಕೊಂಕು ಇತ್ತು ಮಾತಲ್ಲಿ.

“ಗೋಪಿಕಾ ! ಹೂ ಈಸ್ ದಿಸ್ ಗೋಪಿಕಾ ?....” –ಎಂದು ಪ್ರಶ್ನಿಸಿದರು ಪ್ರಾಂಶುಪಾಲರು. ಅವರ ಅಂಗರಕ್ಷಕ ಗಫೂರನು ಸಹಾಯಕ್ಕೆ ಬಂದ......

“ಓಸಾಬ್ .. ನೀವೂ ಖಿಡ್ಕಿಮೆ ದೇಕ್ಕೆ ಕೊನ್ರೆ ಓ ಲಡ್ಕಿಕರ್ರೊ ಪೂಚ್ಯಾನ್ಸೆ....” ಅವಮ್ಮ ಗೌರ್ನಮೆಂಟ್ ಅಡ್ವೋಕೇಟ್ ಕ ಬೇಟಿ ಗೋಪಿಕಾ ಅವಮ್ಮಾ........”

—ಎಂದಾಗ ಇಡೀ ಕ್ಲಾಸು ಡೌನ್ ವಿತ್ ಪ್ರಿನ್ಸಿಪಾಲ್ ಸಾಲೇಮಾನ್ ಎಂದು ಘೋಷಿಸಿತು. ಸಾಲೆಮಾನ್ ಸಾಹೇಬ್ರಿಗೆ ಈ ಗಫೂರ್ ಸಾಹೇಬು ಈತರಹ ನಿಜಹೇಳಿ ಪೇಚಿಗೆ ಬೀಳುವಂತೆ ಮಾಡುತ್ತಿದ್ದುದುಂಟು. ವಾತಾವರಣ ಗಂಭೀರವಾಗಿತ್ತು. ನಿಜ ಏನು ಅನ್ನೋದನ್ನ ಕಂಡುಹಿಡಿದು ಈ ರೀತಿಯ ಉದ್ರಿಕ್ತ ಪರಿಸ್ಥಿತಿಗೆ ಕಾರಣ ಏನು? ಇದನ್ನು ಇನ್ನೂ ಹದಗೆಡಿಸಿ ಊರಲ್ಲಿನ ಎಲ್ಲಾ ಸ್ಕೂಲು ಕಾಲೇಜು ಕಿಟಕಿಗಳ ಗಾಜು

ರಸ್ತೆ ದೀಪಗಳ ಬಲ್ಬುಗಳನ್ನೂ ಈ ಎಚ್ಚೆತ್ತ ವಿದ್ಯಾರ್ಥಿವರ್ಗ ಒಡೆದು ಹಾಕುವು ದನ್ನು ನಿಲ್ಲಿಸುವುದು ಪ್ರಾಂಶುಪಾಲರ ಕರ್ತವ್ಯ.

"ಪೋಲೀಸ್ ಕು ಬೋಲಿಂಗೇ......"–ಎಂದ ಅಬ್ದುಲ್ ಗಫಾರ್‌ಖಾನ್.

"ನೋನೋ- ನೊ ಪೋಲೀಸ್ .. ಐ ವಿಲ್ ಹ್ಯಾಂಡ್ಲ್ ದಿ ಸಿಚುಏಷನ್..."

–ಎಂದವರೇ ಪ್ರಾಂಶುಪಾಲರು ಕ್ಲಾಸ್ ರೂಮಿನ ಲೆಕ್ಚರರ್ ವೇದಿಕೆ ಏರಿ ಮುಂದಿದ್ದ ಮೇಜಿನ ಮೇಲೆ ಕೂತು ಎಲ್ಲರೂ ಕೂಡುವಂತೆ ವಿನಂತಿಸಿಕೊಂಡರು. ಎಲ್ಲರನ್ನೂ ಸಮಾಧಾನದ ಮಾತಿನಿಂದ ಸಂತೈಸುವುದರಲ್ಲಿ ಯಶಸ್ವಿಯಾದರು. ಇದ ನಂತರ ಅಪರಾಧಿಯಂತೆ ಕೆಳಗೆ ಕೈ ಕಟ್ಟಿನಿಂತ ಮಾದೇವಯ್ಯನವರನ್ನು ನೋಡುತ್ತಾ...

"ವ್ಹಾಟ್ ಈಸ್ ಆಲ್ ದಿಸ್ ಮಹದೇವಯ್ಯ.... ಹೌ ಇಟ್ ಸ್ಟಾರ್ಟೆಡ್...."

ಭಾರವಾದ ಮನಸ್ಸಿನಿಂದ ಪಾರೆಗಣ್ಣನ್ನೂ ಬೀರುತ್ತಾ ಸಿದ್ಧರಾಮುನನ್ನು ನೋಡಿ ದರು ಮಾದೇವಯ್ಯನವರು. ಸಿದ್ದರಾಮು ಎದ್ದು –ಪಾಯಿಂಟ್ ಹಾಕಿದ—

"ಪ್ರಾಂಶುಪಾಲ ಮಹಾಶಯರೆ- ತಾವು ಕನ್ನಡದಲ್ಲೇ ವಿಚಾರಣೆ ಮಾಡಬೇಕು ಈ ನಾಡು ಕನ್ನಡ ನಾಡು ತಿಳಿದಿರಲಿ... ನಿಮಗೆ ಕನ್ನಡ ಬರದೇ ಇದ್ರೆ ಕಲ್ತು ಬರೋ ತನಕ ನಾವು ಶಾಲೆ ಹೊರಗಡೆ ಘೋಷಣೆ ಮಾಡ್ತಾ ಮುಷ್ಕರದಲ್ಲಿರ್‍ತೇವೆ....

ಪ್ರಾಂಶುಪಾಲರು ಪೇಚಿಗೆ ಬಿದ್ದರು. ಸಿದ್ರಾಮು ಹೇಳುವುದರಲ್ಲಿ ನಿಜ ಇತ್ತು. ಕೆಲವೇ ಘಂಟೆಗಳ ಕೆಳಗೆ 'ಕಿಂಗ್ ಸಾಲೋಮನ್' ಪಿರೀಯಡ್‌ನಲ್ಲಿ ಇಂಗ್ಲೀಷ್ ಪಾಠ ವನ್ನು ಕನ್ನಡದಲ್ಲೇ ಮಾಡಬೇಕೆಂದು ತರ್ಲೆ ಮಾಡಿದ್ದರು. ಈಗೇನು ಮಾಡೋದು ಅಂತ ಗಫೂರನನ್ನು ನೋಡಿದರು.

"ಪ್ಕೋ ಕನ್ನಡಿ ಮೆ ಎನ್‌ಕ್ವೈರೀ ಕರೂಂ" –ಎಂದ. ನೊ' ಎಂದರು ಸಾಲೋಮನ್ ಮಾದೇವಯ್ಯನವರು ಪ್ರಾಂಶುಪಾಲರ ಮತ್ತು ವಿದ್ಯಾರ್ಥಿಗಳ ಒಮ್ಮತದಿಂದ ತಾವೇ ವಿಚಾರ ವಿನಿಮಯ ಮಾಡಿ ಈ ಪ್ರಸಂಗ ವಿಪರೀತಕ್ಕೆ ಹೋಗದಂತೆ ಮಾಡಬೇಕೆಂದು ಪ್ರಯತ್ನಿಸಿದಾಗ, ಅವರು ಅಪರಾಧಿ ಸ್ಥಾನದಲ್ಲಿರುವುದರಿಂದ ಅದು ಆಗಲ್ಲ ಎಂದು ಸಿದ್ರಾಮು ತೀರ್ಪು ಹೇಳಿದ. ಕಡೆಗೆ ಕನ್ನಡ ಪಂಡಿತರು ವಿಚಾರಣೆ ಮಾಡಲು ಅಡ್ಡಿ ಇಲ್ಲ ಎಂದು ಸರ್ವಾನುಮತದಿಂದ ನಿರ್ಧಾರವಾಯಿತು. ಇದೂ ಅಲ್ಲದೆ- ಈ ವಿಚಾರ ಕ್ಲಾಸ್‌ರೂಮಲ್ಲಿ ಆಗಕೂಡದು ಎಲ್ಲಾ ಕ್ಲಾಸಿನ ಹುಡುಗರೂ ಇಣುಕುತ್ತಾರೆ ಪ್ರಾಂಶು ಪಾಲರ ಆಫೀಸಿನಲ್ಲಿ ಆಗಬೇಕೆಂದೂ- ವಿದ್ಯಾರ್ಥಿ ಮುಖಂಡ ಸಿದ್ರಾಮು–ರಾಮಾನುಜ ಮದ್ವಾರಾಜ್– ಶಂಕರ್– ಮತ್ತು ಯಾವಪಾರ್ಟಿಗೂ ಸೇರದ ಹಿಂದುಳಿದವರ ಪ್ರತಿ ನಿಧಿಯಾಗಿ ಹಲಗ ಇರತಕ್ಕದ್ದೆಂದೂ ನಿರ್ಧಾರ ಆದಕೂಡಲೆ ಪ್ರಾಂಶುಪಾಲರ ಆಫೀಸು ಶುದ್ಧ ಮಾಡಲು ಗಫೂರ ಓಡಿಹೋದ.

☆

ಕನ್ನಡ ಪಂಡಿತರು ಮುಖ್ಯ ಆಸನದಲ್ಲಿ ಮಂಡಿಸಿ ಮ್ಯಾಜಿಸ್ಟ್ರೇಟ್ ಥರಾ ವಿಚಾರಣೆಗೆ ತೊಡಗಿದರು.

"ಸಿದ್ರಾಮಾ ನಿಮ್ಮ ಪಾಯಿಂಟ್ ಏನು?"

"ಸಾರ್—ಈ ಮಾದೇವಯ್ಯನವರು ಜಾತೀಯತೆಯ ಮಾತೆತ್ತಿ ಕಾಲೇಜಿನ ವಾತಾವರಣ ಕಲಕಿ ಗಬ್ಬು ರಾಡಿ ಮಾಡ್ತಿದಾರೆ .."

"ಮಾದೇವಯ್ಯ. . .ನಿಮ್ಮ ಅಂಬೋಣ ಏನು?..."

"ನಾನು ನಿರಪರಾಧಿ ಪಂಡಿತರೆ- ಪಾಠ ಹೇಳುವಾಗ ಯಾವ ರಿ,ತಿ ಹೇಳಿದರೆ ವಿದ್ಯಾರ್ಥಿಗಳಿಗೆ ವಿಷಯ ಮನದಟ್ಟಾಗುತ್ತೆಂತ ನನಗೆ ಗೊತ್ತು .. ಹಾಗೇ ಪಾಠ ಮಾಡ್ತಿದ್ದೆ..."

"ಸುಳ್ಳು... ಈ ರಾಮಾನುಜ - ಮಧ್ವರಾಜ್ - ಶಂಕರರನ್ನ ತ್ರಿಮತಸ್ಥರೇ ಎಂದ್ರು... ಆಮ್ಯಾಲೆ ಅವರನ್ನ ದನಾ ಕಾಯಾಕೇ ಲಾಯಕ್ಕು ಅಂದ್ರು...,"

"ಅದ್ರಾಗೆ ತಪ್ಪೇನು...ಪಾಠದ ಕಡೆ ಗಮನ ಕೊಡ್ದೆ ಕಿಟ್ಕೀಲಿ ಹುಡಗೀರನ್ನು ನೋಡ್ತಾ ಕಿಸಿಕಿಸಿ ನಗಬೇಕು ಯಾಕೆ?"

"ಆ ಪಾಯಿಂಟಲ್ಲ ಸಾರ್... ಹುಡುಗೀರ್ನ ನಮ್ಮ ಪ್ರಿನ್ಸಿಪಾಲರೇ ನೋಡ್ತಾರೇಂತ ಗಫೂರ್ ಸಾಬ್ರೇ ಹೇಳಿದಾರೆ— ಅದ್ಕಲ್ಲ... 'ದನಕಾಯೋದು' ಅಂದ್ರಲ್ಲ ಅದು ಪಾಯಿಂಟು..." ಎಂದ ಸಿದ್ರಾಮ.

"ಅದು ಏನು ಬೈಧುಂಗಾತೇನಪಾ... ನಿನ್ನ ಮನಸ್ನಾಗೆ ಏನದೆ ಹೇಳು..."

"ಶ್ರೀಕೃಷ್ಣ ದನ ಕಾಯ್ತಿದ್ದ-- ನಮ್ಮಗೊಲ್ರು ದನ ಸಾಕೋದು—ಕಾಯೋದು ಮಾಡ್ತಾರೆ. ಪಶು ಸಂಗೋಪನಾ ಇಲಾಖೆಗೆ ನಮ್ಮ ಒಬ್ಬ ಮಂತ್ರೀನೇ ಅದಾರೆ... ಅಂಥಾದ್ರಾಗೆ ದನಾ ಕಾಯೋರಿಗೆ ಅವಮಾನ ಮಾಡ್ತಾ ಅದಾರೆ ಮಾದೇವಯ್ಯ ನೋರು..."

"ಲೋಕಾಭಿರಾಮವಾಗಿ ರೂಢಿಯಾಗಿ ಬಂದ ಮಾತಪ್ಪ ಅದು ಅದನ್ನ ಗಂಭೀರ ವಾಗಿ ತೊಗೋಬಾರ್ದು"

ಇಂಥಾ ಮಾತೇ ನಮ್ಮನ್ನ ರೇಗ್ಸಾದು..... ಅವರ ಪಾಠ ಅವರು ಮಾಡ್ಲಿ — ಈ ತ್ರಿಮತಸ್ಥರು ಅಂತ ಅವರನ್ನು ಯಾಕೆ ಕ್ಲಾಸ್ ರೂಮಿನಿಂದ ಹೊರಗೆ ಹಾಕಲಿಲ್ಲ..... ಗೋಪಿಕಾಬಾಯಿನ್ನ ಆ ಮೂರು ಜನ ನೋಡಿದ್ದಾರೆ. ಮಾದೇವಯ್ಯನೋರು ನೋಡಿದಾರೆ- ನಮ್ಮ ಪ್ರಿನ್ಸಿಪಾಲರೂ ನೋಡ್ತ್ಯಾರೆ--ಅಲ್ಲೇನೋ ಗಫೂರ್ ಸಾಬ್..."

"ಹಾಂ ಸಾಬ್ — ಹಂಭಿದೇಖ .."

"ಅದು ಸತ್ಯ ..." ರಾಮಾನುಜ.

"ಅದು ಸುಂದರ..." ಮಧ್ವರಾಜ್.

"ಅದು ಜೀನತ್ ಅಮ್ಮಾನ್ ಎಂಬೋನಟಿ ಸತ್ಯಂ-ಶಿವಂ-ಸುಂದರ್ ಸಿನಿಮಾದಲ್ಲಿ ಇದ್ದಂಗೆ" ಎಂದ ಶಂಕರ. ಕನ್ನಡ ಪಂಡಿತರು ತಲೆ ಕೆರೆದುಕೊಂಡರು. ವಿಚಾರಣೆ ಎಲ್ಲಿ ಎಲ್ಲಿಗೋ ಹೋಗಿತ್ತು. ಕಡೆಗೆ ಕನ್ನಡ ಪಂಡಿತರು ತೀರ್ಮಾನ ಹೇಳಿದರು.

"ಸುಂದರವಾದ ಸತ್ಯವನ್ನು ಎಲ್ಲರೂ ಶಿವ ಎಂದು ಒಪ್ಪಲಾಗಿದೆ. ಮಾದೇವಯ್ಯ ನವರು -'ದನಾ ಕಾಯೋಕೇ ಲಾಯಕ್ಕು' ಅಂದದ್ದು ತಪ್ಪು- ಕ್ಷಮಾಪಣೆ ಕೇಳಬೇಕು. ಎಲ್ಲರಿಗೂ ಸುಂದರವಾದದ್ದು ಕಣ್ಣಿಗೆ ಬೀಳೋದು ಸತ್ಯ. ಹುಡುಗರು ಕೇಳ್ಲಿ ಬಿಡ್ಲಿ --ದನಾ ಕಾಯಲಿ ಬಿಡ್ಲಿ ತಮ್ಮ ಪಾಡಿಗೆ ತಾವು ಲಕ್ಚರರುಗಳು ಪಾಠ ಎಂಬುದನ್ನು ಪಿರಿಯಡ್ ಪೂರ್ತಿ ಪದರಿ ಹೋಗಬೇಕು. ಸಧ್ಯಕ್ಕೆ ಈ ಪ್ರಸಂಗ ಇಲ್ಲಿಗೆ ನಿಲ್ಲಿಸಿ ಮುಂದೆ ಹೀಗೆ ಆಗದಂತೆ ಲಕ್ಚರರುಗಳು ಎಚ್ಚರಿಕೆ ಇಂದ ಇರಬೇಕು. ಈ ಗೋಪಿಕಾ ಪ್ರಕರಣ ದಲ್ಲಿ ಪ್ರಾಂಶುಪಾಲರೂ ಕೊಂಚ ಭಾಗಿ ಎಂದು ಗಫೂರ ಹೇಳಿದ್ದು, ಶ್ರೀಮತಸ್ವರು ಮಾಡಿದ್ದು ತಪ್ಪಲ್ಲ ಅದು ಮಾನವ ಸಹಜ ದೌರ್ಬಲ್ಯ ಎಂದೂ ಮಾದೇವಯ್ಯನವರೂ ಗೋಪಿಕೆಯನ್ನು ನೋಡಿದರು ಎಂಬುದೂ ಸಾಬೀತಾಗಿದೆ.

ಇನ್ನು ಮೇಲೆ ಎಲ್ಲರೂ ಕಿಟಕಿಯಲ್ಲೇ ನೋಡುತ್ತಿರಬೇಕು- ಲಕ್ಚರರು ಲಕ್ಚರ್ ಹೊಡಿತಿರಬೇಕು– ಇದು ನನ್ನ ತೀರ್ಮಾನ"

--ಎಂದು ನಶ್ಯ ಏರಿಸಿ ಎದ್ದರು. ಎಲ್ಲರೂ ಈ ತೀರ್ಪಿಗೆ ಮೆಚ್ಚಿಕೊಂಡು-- ಮಾದೇವಯ್ಯ 'ಸಾರಿ' ಬಾಯ್ಸ್-- ಎಂದಾಗ ಸಭೆ ಭರಕಾಸ್ತಾಯಿತು. ಇಡೀ ದೇಶ ದಲ್ಲೇ ಹರಡಬೇಕಾಗಿದ್ದ ವಿದ್ಯಾರ್ಥಿ ಮುಷ್ಕರವನ್ನು ಕನ್ನಡ ಪಂಡಿತರು ತಪ್ಪಿಸಿದ್ದರು.

ಹುಡುಗರೆಲ್ಲಾ ಕಿಟಕಿಯಲ್ಲಿ ಪಕ್ಕದ ಹುಡುಗಿಯರ ಕಾಲೇಜು ನೋಡಲು ಹೊರಟರು. ಇವರುಗಳು ಹೋಗುವ ಹೊತ್ತಿಗೆ ಹುಡುಗಿಯರೆಲ್ಲಾ ಆಗಲೇ ಅವರು ಗಳ ಕ್ಲಾಸ್‌ರೂಮಿನ ಕಿಟಕಿಯಲ್ಲಿ ಹಾಜರಿದ್ದರು.

—ದಾಶರಥಿದೀಕ್ಷಿ

ಧಾರವಾಹಿ ಕಾದಂಬರಿ

# ಮಂದಾರ

## ೧

ಕೋಗಿಲೆಯೊಂದು ಮರದ ಮೇಲೆ ಕೂಗುತ್ತಿತ್ತು. ಊರ ಹೊರಗೆ ಗಂಟೆ ಹೊಡೆದ ಸದ್ದಾಯಿತು. ಆಕಾಶ ಮಧ್ಯದಲ್ಲಿದ್ದ ಬೂದಿ ಬಣ್ಣದ ಮೋಡ ಸ್ವಲ್ಪ ಹೊತ್ತು ಸ್ತಬ್ಧವಾಗಿ ನಿಂತು ಮಳೆಗರೆಯಲೋ ಬೇಡವೋ ಎಂದು ಆಲೋಚಿಸಿ ಹನಿಗಳನ್ನು ದುರಿಸಲಾರಂಭಿಸಿತು. ಬೇಸರ ಬಂದಿತೋ ಏನೋ ಮುಂದಕ್ಕೆ ಹೋಗಿ ಬಿಟ್ಟಿತು.

ಮಂದಾರ ತನ್ನ ಕೋಣೆಯಲ್ಲಿ ನಿಂತು ಮಾಡಿಕೊಂಡಿದ್ದ ಮೇಕಪ್ ಅನ್ನು ಸೂಕ್ಷ್ಮದೃಷ್ಟಿಯಿಂದ ನೋಡಿಕೊಂಡಳು. ಅವಳಿಗೆ ಅಷ್ಟು ತೃಪ್ತಿಕರವಾಗಿ ಕಾಣಿಸಲಿಲ್ಲ. ಕೆಲವು ದಿನಗಳ ಹಿಂದೆ ದಾವಣಗೆರೆಯಲ್ಲಿ ನೋಡಿದ ಲೈಲಾ-ಮಜನೂ ಉರ್ದು ನಾಟಕದಲ್ಲಿದ್ದ ಲೈಲಾನ ಸಖಿಯ ಹಾಗೆ ಕಾಣುತ್ತಿದ್ದಳು. ಅವಳಿಗೆ ಬೇಕಾಗಿದ್ದುದು ಜಯಪ್ರದ, ಮಂಜುಳಾ, ಇತ್ಯಾದಿಗಳೆಲ್ಲರಿಗಿಂತ ಸ್ಟನ್ನಿಂಗ್ ಆಗಿ ಕಾಣಿಸುವ ಒಂದು ರೂಪ. ಅದು ಇಲ್ಲವೆಂದು ಒಪ್ಪಿಕೊಳ್ಳಲು ಅವಳು ಸಿದ್ಧಳಿರಲಿಲ್ಲ. ನೋಡಿಕೊಂಡರೆ ನಾಚ್‌ವಾಲಿಯ ಹಾಗೆ ಕಾಣುತ್ತಿದ್ದಳು. ಮುಂದಿಟ್ಟ ಹೆಜ್ಜೆ ಹಿಂದಿಡಲು ಮನಸ್ಸಿಲ್ಲ. ಹೋಗಲೋ ಬೇಡವೋ ಡ್ರೆಸ್ ಛೇಂಜ್ ಮಾಡಿದರೆ ಹೇಗೆ ಎಂದಿತ್ಯಾದಿಯಾಗಿ ಯೋಚಿಸಿದಳು.

ಆದರೆ ಹೋಗಲೇಬೇಕಾಗಿತ್ತು. ಎರಡನೆಯ ಪಿರಿಯಡ್ ಟೆಸ್ಟ್! ಇದೊಂದು ಪ್ರಾರಬ್ಧ. ಹೋದರೆ ಹೋಗಬಹುದು ಬಿಟ್ಟರೆ ಬಿಡಬಹುದು. ಆದರೆ ಟೆಸ್ಟ್ ಆದಕೂಡಲೇ ಸೆಲೆಕ್ಷನ್ ಟ್ರಯಲ್. ತನ್ನನ್ನು ಬಿಟ್ಟರೆ ಇನ್ನಾರಿಗೆ ಸೆಲೆಕ್ಷನ್? ತನ್ನ ಹಾಗೆ ಹಾಡುವವರಾರು? ಕೋಗಿಲೆಯನ್ನು ಕೇಳಿದರೂ ತನಗೇ ಛಾನ್ಸ್‌ಕೊಟ್ಟು, ಸ್ಪರ್ಧೆಯಿಂದ ಹಿಂದಕ್ಕೆ ಸರಿಯುತ್ತಿತ್ತು. ರಮಾಗೆ ಛಾನ್ಸ್ ಕೊಡುವರೇ? ಕೊಡಲಿ, ಗರುಡಗಂಬಕ್ಕೆ ದಟ್ಟಿ ಸುತ್ತಿದ ಹಾಗಿದ್ದಾಳೆ. ಅವಳನ್ನು ಸಿಂಗರೇಣಿ ಕಲ್ಲಿದ್ದಿಲು ಗಣಿಯಲ್ಲಿ ಅಗೆದು ಹೊರತಂದಿರಬೇಕು. ಸಾವಿತ್ರಿಗೆ ಸಾ ಯಾವುದೋ ಪಾ ಯಾವುದೋ ಗೊತ್ತಿಲ್ಲ. ಆದರೆ ಸೆಲೆಕ್ಷನ್ ಕಮಿಟಿಯಲ್ಲಿ ಇಬ್ಬರಿಗೂ ಸಪೋರ್ಟ್ ಇದೆ. ಇನ್ನು ಪ್ರೇಮ! ತಲೆ ತಿರುಗಿಸುವ ಭರದಲ್ಲಿ ಅವಳ ಮೂಗು ಕಿವಿ ಯಾವುದೂ ಕಾಣುವುದಿಲ್ಲ. ವಸಂತ? ಅವಳಿಗೆ ಶಿಶಿರ ಅಂತ ಹೆಸರಿಟ್ಟಿದ್ದರೆ ಚೆನ್ನಾಗಿತ್ತು. ಇಪ್ಪತ್ತೈದು ಪರ್ಸೆಂಟ್ ಬಿಳಿಕೂದಲು. ಇವರೇನು ಸುಬ್ಬಲಕ್ಷ್ಮಿಗಳಲ್ಲ, ಜಾನಕಿಗಳಲ್ಲ, ಲತಾ

ಮಂಗೇಶ್‌ಕರ್‌ಗಳಲ್ಲ. ಕಾಲೇಜಿಗೆ ಪ್ರೈಸ್ ಬೇಕಿದ್ದರೆ ತನ್ನ ಬ್ಯೂಟಿ ಮತ್ತು ಟ್ಯಾಲೆಂಟ್‌ಗಳಿಂದ ಮಾತ್ರ ಸಾಧ್ಯ.

ಆದರೆ ಛಾನ್ಸ್‌ಗೆ ಏನನ್ನೂ ಬಿಡಲು ಸಾಧ್ಯವಿಲ್ಲ. ಸೆಕೆಂಡ್ ಪಿರಿಯಡ್ ವೆಂಕಟಪ್ಪನೋರ ಕೆಮಿಸ್ಟ್ರಿ ಟೆಸ್ಟ್. ಅವರು ಪ್ರಿನ್ಸಿಪಾಲರು. ಸೆಲೆಕ್ಷನ್ ಕಮಿಟಿ ಛೇರ್ಮನ್ನರು ಯಾಕೋ ಏನೋ ಸಾವಿತ್ರಿ ನಾಲ್ಕೈದು ದಿನಗಳಿಂದ ಅವರ ಹತ್ತಿರ ಬಹಳ ಮಾತಾಡುತ್ತಿದ್ದಾಳೆ. ವಸಂತ, ರಮಾ ನಿನ್ನೆ ಸಂಜೆ ಅವರ ಛೇಂಬರಿಗೆ ಹೋಗಿದ್ದರು.

ಅಲ್ಲದೇ ……ಈ ರಾಜೀವ. ಇವನೇನೋ ಕೈಕೊಡುವ ಹಾಗೆ ತೋರುತ್ತದೆ.

ಛೇ .... ರಾಜೀವ ಅಂತಹವನಲ್ಲ. ಅವನಿಗೆ ಮಪ್ಪಿಗ್ರಿ ಇದೆಯೋ ಹೊರತು ಪಕ್ಷ ಪಾತವಿಲ್ಲ. ಅವನಿಗೆ ತನ್ನನ್ನು ಕಂಡರೆ ಅಪಾರ ಪ್ರೇಮ.

'ಈ ರಾಜೀವ, ವಸಂತ, ವೆಂಕಟಪ್ಪ, ಮ್ಯಾಕ್‌ಬೆತ್, ಒಥೆಲೋ ಇವರಿಗೆಲ್ಲಾ ಗೋಲಿ ಉಡಾಯಿಸಿ....' ಎಂದು ಕೊಂಡಳು..........

ಹಾಗೆಯೇ ಅವಳಿಗೆ ಒಂದು ಹಗಲುಗನಸು ಕಾಣಿಸಿತು.

ಅಲ್ಲಿ ಮುಗಿಲೆತ್ತರದ ನೀಲಗಿರಿಮರಗಳು ಎರಡೂ ಬದಿಯಲ್ಲಿ ಹಬ್ಬಿರುವ ರಾಜ ಮಾರ್ಗದಲ್ಲಿ ಮೋಟಾರಿನಲ್ಲಿ ಕುಳಿತು ಜುಮ್ಮೆಂದು ಪಯಣಿಸಿ, ಪೋಲಾಳ್ವ ವಿಶ್ವ ವಿದ್ಯಾನಿಲಯದ ಬಯಲು ರಂಗ ಮಂಟಪದ ಹೊನಲು ದೀಪದಡಿಯಲ್ಲಿ ವೇದಿಕೆಯ ಮೇಲೆ ನಿಂತು.......

ಜೊತೆಯಲ್ಲಿ ...... ಜೊತೆಯಲ್ಲಿ ಯಾರು ? ಯಾರು ?

ಇನ್ನಾರು ಮನ್ಮಥ ಸುಂದರಾಕಾರನಾದ ಹ್ಯಾಂಲೆಟ್ .... ಹೌದು ಹ್ಯಾಂಲೆಟ್ಟೇ.

ಕಣ್ಣಿನಲ್ಲಿ ಪ್ರಣಯ ಜ್ವಾಲೆ, ಕಂಠದಲ್ಲಿ ತುಂಬುರು ನಾರದರ ಸುಸ್ವರ... ಗಾಯನದಲ್ಲಿ ಗಂಧರ್ವಲೋಕದ ಭಾವನೆ ....ಶೃತಿಯೊಂದು.....ಒಡಲೆರಡು ಮನವೊಂದು ..... ಹೊಮ್ಮಿ ಬರುತ್ತದೆ ದಿವ್ಯಗಾಯನ .....
ತನ್ನ ಹ್ಯಾಂಲೆಟ್ಟಿನ ಕಂಠದಿಂದ.

ಬಂದೆ ಗೆಳತಿ ತಂದೆ ನಿನಗೆ
ಚೆಂದದ ಈ ಮಲ್ಲಿಗೆ
ಮಂದಹಾಸ ಸೂಸುತ್ತಿತ್ತೆ
ಹೊರಟೆ ನೀನು ಎಲ್ಲಿಗೆ
ಅತ್ತ ಇತ್ತ ಸುತ್ತ ಮುತ್ತ
ಕತ್ತಲಾಯ್ತು ಬಾಲೆ
ಹೊತ್ತಿಹೊಗೆದು ಭುಗಿಲೆನುವುದು

ಅಂತರಂಗ ಜ್ವಾಲೆ
ಅಗಲಿಕೆಯುರಿ ನಂದಲಿದೋ
ಪ್ರಣಯ ಪುಷ್ಪಮಾಲೆ
ಝುಮ್ಮೆನಲೀ ಮೈಮನಗಳು
—ನಲುಮೆಯ ಹೂಮಾಲೆ.

ಚಪ್ಪಾಳೆ ಮುಗಿಲು ಮುಟ್ಟುವುದು ಪ್ರಣಯಪುಷ್ಪ ಮಾಲೆಗೋ, ನಲುಮೆಯ ಹೂಮಾಲೆಗೋ ಎಂದು ಅವಳಿಗೆ ಸ್ಪಷ್ಟವಾಗಿ ತಿಳಿಯಲಿಲ್ಲ.

ಹೊರಗೆ ವರಾಂಡದಲ್ಲಿ ಕಿಂಗ್‌ಲಿಯರ್, ಅಲ್ಲ ಅವಳ ತಂದೆ ಜೋರಾಗಿ ಕೂಗುತ್ತಿದ್ದರು.

'ಯಾರೂ?'

'ನಾನು, ಪ್ರಭಾ......'

'ಪ್ರಭಾ ಅಂದರೇ?......'

'ಮೀನಾಕ್ಷಿ ತಂಗೀ'......'

'ಮೀನಾಕ್ಷಿ ಅಂದರೇ?'

ಪ್ರಭಾ ಜೋರಾಗಿ ನಕ್ಕಳು.

"ಇದೇನು ಅಂಕಲ್ ಹೀಗೆ ಕೇಳ್ತೀರಿ. ನಾನು ಪ್ರಭಾ......ತಿಮ್ಮಪ್ಪನವರ..."

"ಹಾ, ಹಾ ......ತಿಳೀತು. ಇದೇನು ಹೀಗೆ ಬಂದೆ ಮಂದ ಒಳಗಿದ್ದಾಳೆ. ದಿನಾ ಆ ಹುಡುಗ ಬರ್ತಿದ್ದ. ನಾಟಕ ಕಂಪ್ನಿಯವನು..... ಇವತ್ತೇನಾದ್ರೂ ಬೆಂಗಳೂರಿಗೆ ಹೋದ್ನೋ ಹೇಗೆ? ಪ್ರಭಾ ಹೇಳಿದಳು. "ಕಂಪ್ನೀವನಲ್ಲ ಅಂಕಲ್. ಏನೂ ಅಲ್ಲ. ನಂಕಾಲೇಜಿನ ಡ್ರಮ್ಯಾಟಿಕ್ಸ್ ಸೆಕ್ರಟ್ರೀ........"

"ಅವನ್ನ ಯಾರು ಕೇಳಬೇಕು ಬೆಂಗಳೂರಲ್ಲಿ?"

"ನಮ್ಮೂರಲ್ಲೇ ಕೇಳೋರು ಗತಿಯಿಲ್ಲ. ಬೆಂಗಳೂರಲ್ಲಿ ಯಾಕೆ ಕೇಳ್ತಾರೆ ..."

"ಅದನ್ನೇ ನಾನೂ ಅಂದ್ಕೊಂಡೆ. ಅವನ್ದೇ ಎಲ್ಲ ಕೈವಾಡ. ಹುಡುಗ್ನು ಒಳ್ಳೆವ್ನೇ. ಏನು ಅವನು ? ಹೆಸರೇನು ? ಹ್ಯಾಗಿದಾನೆ. . . . "

"ಅವ್ನೇ ರಾಜೀವ, ನೈಸ್ ಚಾಪ್"

"ರಾಜೀವ ಅಂದ್ರೆ . . . . . . . ."

"ಡ್ರಮ್ಯಾಟಿಕ್ಸ್ ಸೆಕ್ರೆಟ್ರೀ . . . ."

"ಹಾಗಂದ್ರೇ . . . . ."

"ಅದೇ ಶಿವಪ್ಪನೋರ ಮಗ . . . . ."

"ಹಾ, ಹಾ, ತಿಳೀತು."

"ಮುಂದೆ. ಹ್ಯಾಗೇ ಅಂತೀ ? ಛಾನ್ಸಸ್ ಏನು ?"

"ಹೇಳೋಕಾಗೋಲ್ಲ. ಬ್ರೈಟ್ ಆಗೋ ಹಾಗೆ ಒಂದು ಸ್ಕೀಂ ಹಾಕಿದೀನಿ. ಒಂದು ಸಾರಿ ಡೆಲ್ಲಿಗೆ ಹೋದ್ರೆ . . . . . . . . . . . . . . . . ."

"ಇದು ಹಾಳು ಕೊಂಪೆ, ಬೆಂಗ್ಳೂರ್ನಲ್ಲಿ ಸೆಟ್ಲ್ ಆದ್ರೇ ಛಾನ್ಸಸ್, ಅವು ಖಂಡಿತ ಲತಾ, ಜಾನಕೀ, ಎಲ್ಲಾರ್ನೂ ಬೀಟ್ ಮಾಡ್ಬೇಕು. . . . . . . . . . ಐ ವಿಲ್ ಸೀ ಟು ದಟ್ . . . ."

"ಅಂಕಲ್, ಅದ್ರಲ್ಲೇನೂ ಇಲ್ಲ, ಅವಳು ಹೀರೋಯಿನ್ ಆಗಬೇಕು . . . . ."

ಪ್ರಭಾ ಧ್ವನಿ ನಿಂತು ಅವಳು ಥಟ್ಟನೆ ಒಳಕ್ಕೆ ಬಂದು

"ಕ್ವಿಕ್ ಮಂದಾ, ಹರಿ ಅಪ್. ಷೂರ್ ಪ್ಲ್ಯಾನ್. ರಾಜೀವ್‌ಗೆ ಹೇಳಿದೀನೀ. ಕ್ಯಾಂಪಸ್ ಹತ್ರ ಆಕ್ವಿಡಕ್ಟ್ ಇದೆಯಲ್ಲಾ ಅಲ್ಲಿ ಕಾದಿರುತ್ತಾನೆ ಅವನ ಕೈಗೆ ಒಂದು ಪುಟ್ಟ ಕನಕಾಂಬರ ಕೊಟ್ಟಿದ್ದೀನಿ. ನೀನು ಹೋಗೋದು, ಬಂದೆ ಗೆಳತಿ ಹೇಳ್ತಾ ಆ ಹೂಗಳ ಅಕ್ವಿಡಕ್ಟ್‌ಗೆ ಹಾಕೋದು . . . . .ಅವನಲ್ಲ, ಬಿ. ಆರ್, ಚೋಪ್ರಾ ಆದ್ರೂ, ನಿನ್ನ ಸೆಲೆಕ್ಷನ್ ಖಂಡಿತ." ಎಂದಳು.

"ವಸಂತ, ವೆಂಕಟಪ್ಪನ ಹತ್ರಾ ಹೋಗಿದಾಳಲ್ಲಾ . . . . ."

ಪ್ರಭಾ "ಅಯ್ಯೋ, ಆ ಮುಂದಿ ಗೊಡ್ಡಿನದು ಏನು ? ಕಾಲೇಜಿನಲ್ಲಿ ಟೆಸ್ಟ್ ಅಂತೆ! ವಸಂತಾ ಹೋಗಲಿ, ಬಾ, ಇಬ್ರೂ ಹೋಗೋಣ . . . . . . ಎಂದಳು.

— ರಮ್ಯ

ಸಣ್ಣ ಕೈಗಾರಿಕೋದ್ಯಮಿ ಯಾರು ?

"ಸಣ್ಣ ಕೈಗಾರಿಕೋದ್ಯಮಿ ಹಲವು ಕುರುಡರು ನೋಡಿದ ಆನೆಯಂತೆ. ಕೇವಲ ಹೋರಾಟಕ್ಕಾಗಿ ಹೋರಾಡುವ ಕಾರ್ಮಿಕ ನಾಯಕನಿಗೆ, ಈತ ದಲಿತರನ್ನು ಶೋಷಿಸುವ ಕ್ರೂರರಾಕ್ಷಸ. ದೊಡ್ಡ ಕೈಗಾರಿಕೆಗಳ ಗ್ರಾಹಕರಿಗೆ, ಸಣ್ಣ ಕೈಗಾರಿಕೆ ಒದಗಿಸುವ ಸಾಮಗ್ರಿಗಳಿಗೆ ಹಣ ಸಂದಾಯ ಮಾಡುವ ಜರೂರು ಇಲ್ಲದಿರುವುದರಿಂದ ಈತ ಸುಲಭವಾಗಿ ಸಿಗುವ ಸಂಪನ್ಮೂಲ. ಲಂಚವಂತನಾದ ಸರ್ಕಾರಿ ಅಧಿಕಾರಿಗೆ ಈತ ಯಾವಾಗಲೂ ಸಿದ್ಧವಾಗಿರುವ ಕಾಮಧೇನು. ಸರ್ಕಾರಿ ಯೋಜನಾ ಅಧಿಕಾರಿಗಳಿಗೆ ಸಣ್ಣ ಕೈಗಾರಿಕೋದ್ಯಮಿ ನಿರುದ್ಯೋಗ ನಿವಾರಕ ತಾರಕ ಮಂತ್ರ. ಹಣ ಒದಗಿಸುವ ಬ್ಯಾಂಕ್ ಅಧಿಕಾರಿಗಳಿಗೆ, ಈತ ತನ್ನ ಉದ್ಯಮದ ಹಣಕಾಸನ್ನು ಸ್ವಂತಕ್ಕಾಗಿ ಬಳಸುವ ಕಿಲಾಡಿ. ಕಳೆದ ಒಂಭತ್ತು ವರ್ಷಗಳಿಂದ ಸಣ್ಣ ಕೈಗಾರಿಕೋದ್ಯಮವನ್ನು ನಡೆಸಿ ಇನ್ನೂ ಉಳಿದಿರುವ ನನ್ನ ಅನಿಸಿಕೆಯಲ್ಲಿ ಇಂದಿನ ಒಬ್ಬ ಸಣ್ಣ ಕೈಗಾರಿಕೋದ್ಯಮಿ ಅತ್ಯಂತ ಚತುರತೆ ಹಾಗೂ ಸಮಯ ಸ್ಫೂರ್ತಿಯನ್ನು ಪಡೆದ ಸರ್ಕಸ್ ಆಟಗಾರ."

—ಎನ್. ನರಸಿಂಹನ್